

ಪೊಡವಿಗೊಡೆಯ ಉಡುಪಿಯ ಕೃಷ್ಣ



ಶ್ರೀ ವಿಶ್ವಮಾನ್ಯತೀರ್ಥರು, ಪೇಜಾವರ ಮಠ



ಶ್ರೀ ವಿಶ್ವಪ್ರಸನ್ನ ತೀರ್ಥರು, ಪೇಜಾವರ ಮಠ, ಕಿರಿಯ ಪಟ್ಟ

ಪೇಜಾವರ ಮಠದ ನಿಕಟಪೂರ್ವ ಸ್ವಾಮೀಜಿ ಶ್ರೀ ವಿಶ್ವಮಾನ್ಯತೀರ್ಥರು ಮತ್ತು ಅವರ ಮಠದ ಪರಿವಾರ



ಪೂರ್ವಾಶ್ರಮದ ರಾಮಕುಂಜ ವೆಂಕಟರಮಣ



ಶ್ರೀ ವಿಶ್ವಮಾನ್ಯತೀರ್ಥರಿಂದ ಹಂಪಿಯಲ್ಲಿ ಸನ್ಯಾಸದೀಕ್ಷೆ



ಬಾಲಸನ್ಯಾಸಿ ಶ್ರೀ ವಿಶ್ವೇಶತೀರ್ಥರು

ವಿದ್ಯಾಗುರು ಶ್ರೀ ವಿದ್ಯಾಮಾನ್ಯರೊಂದಿಗೆ



ಶಿಷ್ಯ ಶ್ರೀ ವಿಶ್ವಪ್ರಸನ್ನರಿಗೆ ಪಟ್ಟಾಭಿಷೇಕ

ಸಂನ್ಯಾಸಿಯಾದರೂ ವಿಶ್ವಸಂಸಾರಿ( ವಿದ್ಯಾಪೀಠದ ವಿದಾರ್ಥಿಗಳೊಂದಿಗೆ)

ನಿ. ಶ್ರೀಶ ಬಲ್ಲಾಳ

೧-೧

# ಅಷ್ಟ ಮಠಗಳು

## ಇತಿಹಾಸ ಮತ್ತು ಸ್ಥಾಪನೆಯ ಉದ್ದೇಶ

### ಪೂರ್ವೇತಿಹಾಸ

ಶ್ರೀ ಮಧ್ವಾಚಾರ್ಯರು (ಕ್ರಿ.ಶ. ೧೨೩೮-೧೩೧೭) ಅನೇಕ ಸನ್ಯಾಸಿ ಶಿಷ್ಯರನ್ನೂ ಗೃಹಸ್ಥ ಶಿಷ್ಯರನ್ನೂ ಪಡೆದಿದ್ದರೆಂಬ ಉಲ್ಲೇಖವನ್ನು ಅವರ ಬಗೆಗೆ ಅತ್ಯಂತ ವಿಶ್ವಾಸಾರ್ಹ ಪ್ರಮಾಣ ಗ್ರಂಥವೆಂದು ಪ್ರಸಿದ್ಧವಾಗಿರುವ ''ಸುಮಧ್ವ ವಿಜಯ''ದ ೧೫ನೇ ಸರ್ಗದಲ್ಲಿ ಕಾಣಬಹುದು. ಸನ್ಯಾಸಿ ಶಿಷ್ಯರಲ್ಲಿ ಉಡುಪಿಯ ಅಷ್ಟಮಠಗಳ ಪ್ರಥಮ ಯತಿಗಳಾದ ಹೃಷಿಕೇಶತೀರ್ಥ, ವಿಷ್ಣುತೀರ್ಥ ಮುಂತಾದ ೮ ಯತಿಗಳನ್ನು ಮತ್ತು ಪದ್ಮನಾಭತೀರ್ಥ, ಸತ್ಯತೀರ್ಥ ಮುಂತಾದವರನ್ನೂ 'ಸುಮಧ್ವವಿಜಯ'ಕಾರರು ಪ್ರತ್ಯೇಕವಾಗಿ ಉಲ್ಲೇಖಿಸಿದ್ದಾರೆ.

ಹೃಷಿಕೇಶತೀರ್ಥರೇ ಮೊದಲಾದ ೮ ಮಂದಿ ಸನ್ಯಾಸಿ ಶಿಷ್ಯರಿಂದ ತೊಡಗುವ ಉಡುಪಿಯ ಅಷ್ಟಮಠಗಳ ವ್ಯವಸ್ಥೆ ಆಚಾರ್ಯರ ಕಾಲದಲ್ಲಿ ಹೇಗಿತ್ತು ಎಂಬುದನ್ನು ಸ್ಪಷ್ಟವಾಗಿ ನಿರ್ಧರಿಸಲು ಸಾಕಷ್ಟು ಐತಿಹಾಸಿಕ ದಾಖಲೆಗಳು ದೊರೆತಿಲ್ಲ. ಪ್ರಾಯಶಃ ಆ ಕಾಲದಲ್ಲಿ ಎಂಟೂ ಯತಿಗಳು ಒಟ್ಟಾಗಿ ಶ್ರೀ ಕೃಷ್ಣ ಮಠದಲ್ಲಿ ನೆಲೆಸಿದ್ದು, ಶ್ರೀಕೃಷ್ಣನ ಪೂಜೆ ಪ್ರವಚನಕಾರ್ಯಗಳನ್ನು ನಡೆಸುತ್ತಿದ್ದರು. ಅಂತೂ ಈ ಕುರಿತು ಮಾಧ್ವ ಸಮಾಜದಲ್ಲಿ ರೂಢಿಗೊಂಡಿರುವ ಕೆಲವು ಐತಿಹ್ಯಗಳನ್ನೇ ನಾವು ಮುಖ್ಯವಾಗಿ ಅವಲಂಬಿಸಬೇಕಾಗಿದೆ.

ಆಚಾರ್ಯರು ಕಣ್ವತೀರ್ಥದಲ್ಲಿದ್ದಾಗ ಹೃಷಿಕೇಶತೀರ್ಥರೇ ಮುಂತಾದ ಯತಿಗಳಿಗೆ ಸಂನ್ಯಾಸಾಶ್ರಮ ದೀಕ್ಷೆಯನ್ನಿತ್ತರು ಎಂಬ ಐತಿಹ್ಯವಿದೆ. ಶ್ರೀ ಹೃಷಿಕೇಶ ತೀರ್ಥರು ಬರೆದ ''ಸಂಪ್ರದಾಯ ಪದ್ಧತಿ'' ಎಂಬ ಪುಟ್ಟ ಕೃತಿ ಇದೆ. ಆ ಕೃತಿಯಲ್ಲಿ ಶ್ರೀ ಮಧ್ವಾಚಾರ್ಯರು ಅಷ್ಟಮಠದ ಯತಿಗಳಿಗೆ ಕರುಣಿಸಿದ ಉಪಾಸ್ಯ ವಿಗ್ರಹಗಳನ್ನು ಈ ರೀತಿ ವಿವರಿಸಲಾಗಿದೆ; ''ಆಚಾರ್ಯರು ಹೃಷಿಕೇಶತೀರ್ಥರಿಗೆ ಸೀತಾಲಕ್ಷ್ಮಣ ಸಮೇತನಾದ ಶ್ರೀರಾಮನ ಮೂರ್ತಿ, ನರಸಿಂಹತೀರ್ಥರಿಗೆ ಚತುರ್ಭುಜ ಕಾಲೀಯಮರ್ದನ ಕೃಷ್ಣ ಮೂರ್ತಿ, ಜನಾರ್ದನತೀರ್ಥರಿಗೆ ದ್ವಿಭುಜ ಕಾಲೀಯಮರ್ದನ ಕೃಷ್ಣಮೂರ್ತಿ, ಉಪೇಂದ್ರತೀರ್ಥರಿಗೆ ಮತ್ತು ವಾಮನತೀರ್ಥರಿಗೆ ವಿಟ್ಠಲ, ವಿಷ್ಣುತೀರ್ಥರಿಗೆ ಭೂವರಾಹ,

ರಾಮತೀರ್ಥರಿಗೆ ನರಸಿಂಹಮೂರ್ತಿ, ಅಧೋಕ್ಷಜತೀರ್ಥರಿಗೆ ವಿಠ್ಠಲನ ವಿಗ್ರಹ – ಈ ರೀತಿ ಪ್ರತ್ಯೇಕವಾಗಿ ಎಂಟು ಉಪಾಸ್ಯಮೂರ್ತಿಗಳನ್ನು ಕರುಣಿಸಿ, ಆ ಎಂಟು ಯತಿಗಳಲ್ಲಿ ಇಬ್ಬಿಬ್ಬರನ್ನು ಒಂದು ಗುಂಪು ಮಾಡಿ, ಈ ನಾಲ್ಕು ದ್ವಂದ್ವಗಳಿಗೂ ಜಪ, ಮಂತ್ರಾದಿ ನಿಯಮಗಳಲ್ಲಿ ಪ್ರತ್ಯೇಕವಾದ ಸಂಪ್ರದಾಯ ವಿಧಿಯನ್ನು ಆಜ್ಞಾಪಿಸಿದರು.'' ಈ ಸಂಪ್ರದಾಯ ವಿಧಿಗನುಸಾರವಾಗಿ ಎಂಟು ಯತಿಗಳ ಮಠಗಳು

೧. ಪಲಿಮಾರು-ಅದಮಾರು

೨. ಕೃಷ್ಣಾಪುರ-ಪುತ್ತಿಗೆ

೩. ಶೀರೂರು-ಸೋದೆ

೪. ಕಾಣಿಯೂರು-ಪೇಜಾವರ

ಎಂಬ ನಾಲ್ಕು ದ್ವಂದ್ವಗಳಾಗಿ ವಿಂಗಡಿಸಲ್ಪಟ್ಟು, ಉಡುಪಿಯಲ್ಲಿ ಶ್ರೀಮಧ್ವಾಚಾರ್ಯರಿಂದ ಸ್ಥಾಪಿಸಲ್ಪಟ್ಟ, ಕೃಷ್ಣನ ಸರದಿಯ (ಪರ್ಯಾಯ) ಪೂಜೆಯ ವ್ಯವಸ್ಥೆಯನ್ನು ಅಳವಡಿಸಿಕೊಂಡರು ಎನ್ನಬಹುದು . ಆಚಾರ್ಯರ ಕಾಲದಿಂದ ಇಂದಿನವರೆಗೆ ಅಷ್ಟಮಠಗಳಲ್ಲಿ ಸುಮಾರಾಗಿ ೩೦ ತಲೆಮಾರಿನ ಯತಿಗಳು ಪೀಠಾರೂಢರಾಗಿದ್ದಾರೆ. ಯತಿಗಳ ಕಾಲದ ವಿವರಗಳು ಪೂರ್ತಿಯಾಗಿ ತಿಳಿಯದಿದ್ದರೂ, ಪ್ರತಿಯೊಂದು ಮಠ ತನ್ನ ಪರಂಪರೆಯ ಯತಿಗಳ ಹೆಸರುಗಳನ್ನು ರಕ್ಷಿಸಿಕೊಂಡು ಬಂದಿದೆ. ಬಾಲಾಶ್ರಮದ ಯತಿಗಳೇ ಗುರುಪೀಠಕ್ಕೆ ಅಭಿಷಿಕ್ತರಾಗುವುದು ಈ ಎಂಟು ಮಠಗಳ ಇನ್ನೊಂದು ಸಂಪ್ರದಾಯ.

ಶ್ರೀ ಮಧ್ವಾಚಾರ್ಯರು ಅಚ್ಯುತ ಪ್ರಜ್ಞ (ಪುರುಷೋತ್ತಮತೀರ್ಥ) ರಿಂದ ಸನ್ಯಾಸದೀಕ್ಷೆ ಪಡೆದು ವೇದಾಂತವಿದ್ಯಾರಾಜ್ಯದ ಪಾಲನೆಗೆ ಪಟ್ಟಾಭಿಷಿಕ್ತರಾದರು (ಸುಮಧ್ವವಿಜಯ-ಸರ್ಗ ೫). ಆದರೆ ತಾವು ಮುಖ್ಯಪ್ರಾಣಾಂಶರೆಂದು ತಮ್ಮ ಗ್ರಂಥಗಳಲ್ಲಿ ಸ್ಪಷ್ಟವಾಗಿ ಪ್ರಕಟಿಸಿರುವ ಆಚಾರ್ಯರು ಶ್ರೀವೇದವ್ಯಾಸರನ್ನುಳಿದು ಯಾವ ಗುರುಪರಂಪರೆಯನ್ನೂ ಸೂಚಿಸದಿರುವುದು ಸಹಜವೇ ಆಗಿದೆ. 'ಸುಮಧ್ವ ವಿಜಯ'ಕಾರರ ಪ್ರಕಾರ ಭಗವಂತನ ಜ್ಞಾನದ ಸಲುವಾಗಿ ಉಡುಪಿಯ ಅನಂತಾಸನ ದೇವರನ್ನು ಸೇವಿಸುತ್ತಿದ್ದ ಅಚ್ಯುತಪ್ರಜ್ಞರಿಗೆ ಆ ದೇವರು ಅನುಗ್ರಹರೂಪವಾಗಿ ಶ್ರೀಮಧ್ವಾಚಾರ್ಯರ ಸಂಪರ್ಕವನ್ನು ಕರುಣಿಸಿದರು. ಶ್ರೀಮಧ್ವಾಚಾರ್ಯರನ್ನು ಸನ್ಯಾಸಿ ಶಿಷ್ಯರಾಗಿ ಸ್ವೀಕರಿಸಿದ ಅಚ್ಯುತಪ್ರಜ್ಞರಿಗೆ ಒಂದು ಪೂರ್ವಾಚಾರ್ಯ ಪರಂಪರೆ ಇತ್ತು ಎಂಬುದನ್ನು 'ಸುಮಧ್ವವಿಜಯ'ಕಾರರು ಸೂಚಿಸಿದ್ದಾರೆ (ಸುಮಧ್ವ ವಿಜಯ ಸರ್ಗ ೫), ಅಚ್ಯುತ ಪ್ರಜ್ಞರ ಮಠವೇ ಆಚಾರ್ಯರ ಪ್ರಿಯ ಶಿಷ್ಯ ಸತ್ಯತೀರ್ಥರ ಪರಂಪರೆಯ ಮಠವಾಗಿ, ಆ ಮಠ ಕವಲೊಡೆದಾಗ ಭಂಡಾರಕೇರಿ ಮತ್ತು ಭೀಮನಕಟ್ಟೆ (ಭೀಮಸೇತು ಮುನಿವೃಂದ) ಮಠಗಳಾದವು ಎಂಬ ಐತಿಹ್ಯವಿದೆ. 'ಸುಮಧ್ವವಿಜಯ'ಕಾರರೇ ಬರೆದಿರುವ 'ಮಣಿಮಂಜರಿ' ಎಂಬ ಚಿಕ್ಕ ಕೃತಿಯಲ್ಲಿ ಅಚ್ಯುತಪ್ರಜ್ಞರ ಪೂರ್ವಾಚಾರ್ಯ ಪರಂಪರೆಯಲ್ಲಿ ಪ್ರಖ್ಯಾತರಾಗಿದ್ದ ದೂರ್ವಾಸ ಪರತೀರ್ಥ, ಸತ್ಯಪ್ರಜ್ಞತೀರ್ಥ, ಪ್ರಾಜ್ಞತೀರ್ಥ ಎಂಬ ಯತಿಗಳ ಉಲ್ಲೇಖವಿದೆ. ಆ ಯತಿಗಳಿಗೆ ಬದರೀ ಕ್ಷೇತ್ರದ ಸಂಬಂಧವಿದ್ದುದನ್ನೂ, ಶಾಂಕರವೇದಾಂತ ಸಂಪ್ರದಾಯದ ಸಂಪರ್ಕವಾದುದನ್ನೂ ಉಲ್ಲೇಖಿಸಲಾಗಿದೆ. ಅಚ್ಯುತಪ್ರಜ್ಞರು ಶ್ರೀಮಧ್ವಾಚಾರ್ಯರಿಗೆ ಶಾಂಕರಸಂಪ್ರದಾಯದ 'ಇಷ್ಟಸಿದ್ಧಿ' – ಎಂಬ ಗ್ರಂಥವನ್ನೇ ಮೊದಲಾಗಿ ಪಾಠಹೇಳಿದರಂತೆ (ಸುಮಧ್ವವಿಜಯ-ಸರ್ಗ ೪), 'ಮಣಿಮಂಜರಿ' ಉಲ್ಲೇಖಿಸಿರುವ ಅಚ್ಯುತಪ್ರಜ್ಞರ ಪೂರ್ವಾಚಾರ್ಯ ಪರಂಪರೆ ಶಂಕರಾಚಾರ್ಯರಿಗಿಂತಲೂ ಪ್ರಾಚೀನವಾದದ್ದು ಎಂದು ಕಾಣುತ್ತದೆ. ಕಾರಣ, ಆ ಯತಿಪರಂಪರೆಯಲ್ಲಿ ಬರುವ ಪ್ರಾಜ್ಞತೀರ್ಥರು ಶಂಕರಾಚಾರ್ಯರ ಸಮಕಾಲೀನರು ಎಂದು ಆ ಗ್ರಂಥದ ಹೇಳಿಕೆ. ಅಷ್ಟಮಠಗಳಲ್ಲಿ ಸಾಂಪ್ರದಾಯಿಕವಾಗಿ ಸ್ವೀಕರಿಸಲ್ಪಟ್ಟಿರುವ ಗುರುಪರಂಪರೆ 'ಹಂಸ' ನಾಮಕ ಭಗವಂತನಿಂದ ಆರಂಭವಾಗಿ ಬ್ರಹ್ಮ, ಬ್ರಹ್ಮಪುತ್ರ ಸನಕಾದಿಗಳು, ದೂರ್ವಾಸರು, ಜ್ಞಾನೇಶತೀರ್ಥರು, ಗರುಡವಾಹನತೀರ್ಥರು, ಕೈವಲ್ಯತೀರ್ಥರು, ಜ್ಞಾನೇಶತೀರ್ಥರು,

ಪರತೀರ್ಥರು, ಸತ್ಯಪ್ರಜ್ಞತೀರ್ಥರು, ಪ್ರಾಜ್ಞತೀರ್ಥರು ಮೊದಲಾದ ಯತಿಗಳ ಮೂಲಕ ಅಚ್ಯುತ ಪ್ರಜ್ಞ (ಪುರುಷೋತ್ತಮತೀರ್ಥ)ರನ್ನು ಸೇರಿ, ಅವರ ಶಿಷ್ಯ ಶ್ರೀಮಧ್ವಾಚಾರ್ಯರ ಕಾಲದಲ್ಲಿ ಹಲವು ಶಾಖೆಗಳಾಗಿ ವಿಸ್ತಾರಗೊಳ್ಳುತ್ತದೆ. ಈ ಯತಿಪರಂಪರೆಯಲ್ಲಿ ಶಂಕರಾಚಾರ್ಯರ ಸಮಕಾಲೀನರೆನ್ನಲಾಗುವ ಪರತೀರ್ಥರಿಗೂ ಅಚ್ಯುತ ಪ್ರಜ್ಞರಿಗೂ ನಡುವೆ ಸುಮಾರು ೪೦೦ ವರ್ಷಗಳ ಅಂತರವಿರುವುದನ್ನು ಡಾ। ಬಿ. ಎನ್. ಕೆ. ಶರ್ಮಾ ಸೂಚಿಸಿದ್ದಾರೆ ('ಹಿಸ್ಟರಿ ಆಫ್ ದ್ವೈತ ಸ್ಕೂಲ್ ಆಫ್ ವೇದಾಂತ'-ಸಂಪುಟ ೧-ಪುಟ ೯೯). ಈ ೪೦೦ ವರ್ಷಗಳಲ್ಲಿ ಆಗಿಹೋದ ಯತಿಗಳ ಕುರಿತು ಇನ್ನಷ್ಟು ಸಂಶೋಧನೆ ನಡೆಯಬೇಕಾಗಿದೆ. ಅಚ್ಯುತ ಪ್ರಜ್ಞರ ಪೂರ್ವಾಚಾರ್ಯರ ಪರಂಪರೆಯ ಬಗೆಗೆ ಪ್ರಚಲಿತ ವಾಗಿರುವ ಉಲ್ಲೇಖಗಳಿಗೆ ಪೂರಕವಾದ ಐತಿಹಾಸಿಕ ದಾಖಲೆಗಳು ಸಾಕಷ್ಟು ದೊರೆತಿಲ್ಲವಾದರೂ, ಅವು ಏನೋ ಪೂರ್ವಕಥೆಯನ್ನು ಸೂಚಿಸುತ್ತವೆ ಎಂಬುದು ಗಮನಾರ್ಹ ವಿಚಾರ.

## ಬೆಳವಣಿಗೆ

ನಾವು ಇಂದು ಉಡುಪಿಯಲ್ಲಿ ಕಾಣುವ ಅಷ್ಟಮಠಗಳ ವ್ಯವಸ್ಥೆಯ ಮುಖ್ಯ ಅಂಶಗಳನ್ನು ಸಿದ್ಧಗೊಳಿಸಿದವರು ಶ್ರೀವಾದಿರಾಜತೀರ್ಥರು (ಕ್ರಿ.ಶ. ೧೪೮೦-೧೬೦೦) ಎಂಬ ಐತಿಹ್ಯ ಜನಜನಿತವಾಗಿದೆ. ''ಶ್ರೀವಾದಿರಾಜ ಗುರುವರಚರಿತಾಮೃತ'' ಮುಂತಾದ ಶ್ರೀವಾದಿರಾಜರ ಜೀವನ ವೃತ್ತಾಂತಗಳೂ ಈ ಐತಿಹ್ಯವನ್ನು ಪುಷ್ಟೀಕರಿಸುತ್ತವೆ. ''ಶ್ರೀವಾದಿರಾಜಗುರುವರ ಚರಿತಾಮೃತ''ದ ಪ್ರಕಾರ ಶ್ರೀವಾದಿರಾಜರಿಗಿಂತ ಹಿಂದೆ ಅಷ್ಟಮಠದ ಯತಿಗಳು ಶ್ರೀಕೃಷ್ಣನ ಪೂಜೆಯ ಸರದಿಯನ್ನು ತಮ್ಮೊಳಗೆ ಎರಡು ತಿಂಗಳಿಗೊಮ್ಮೆ ಬದಲಾಯಿಸಿಕೊಳ್ಳುತ್ತಿದ್ದರು. ಇದು ಶ್ರೀಮಧ್ವಾಚಾರ್ಯರು ಕಲ್ಪಿಸಿದ ವ್ಯವಸ್ಥೆ. ಎಂಟೂ ಯತಿಗಳು ಶ್ರೀಕೃಷ್ಣಮಠದ ವಠಾರದಲ್ಲೇ ವಾಸವಾಗಿದ್ದು ಪೂಜೆಪ್ರವಚನಾದಿಗಳನ್ನು ನಡೆಸುತ್ತಿದ್ದರು ಎಂಬ ಐತಿಹ್ಯವಿದೆ. ಉಡುಪಿಯ ರಥಬೀದಿಯ ಪರಿಸರದಲ್ಲಿ ಎಂಟು ಮಠದ ಯತಿಗಳಿಗೆ ಪ್ರತ್ಯೇಕ ಮಠಗಳನ್ನು ಏರ್ಪಡಿಸಿ, ಮಠಗಳ ಪೂಜೆ, ಅಧ್ಯಯನ, ಪ್ರವಚನ ಮುಂತಾದ ಕಾರ್ಯಗಳು ವ್ಯವಸ್ಥಿತ ರೀತಿಯಲ್ಲಿ ನಡೆಯುವಂತೆ ಮಾಡಿದವರು ಶ್ರೀವಾದಿರಾಜರು. ಶ್ರೀಕೃಷ್ಣನ ಪೂಜಾಧಿಕಾರದ ಸರದಿಯನ್ನು ಎರಡು ವರ್ಷಕ್ಕೊಮ್ಮೆ ಬದಲಾಯಿಸಿಕೊಳ್ಳುವ ಹೊಸ ಪರ್ಯಾಯ ವ್ಯವಸ್ಥೆಯನ್ನು ಆ ಹೊಸ ವ್ಯವಸ್ಥೆಗೆ ಪೂರಕವಾಗಿ ಹಲವು ರೀತಿ ರಿವಾಜುಗಳನ್ನೂ ಅವರೇ ರೂಢಿಗೊಳಿಸಿದರು. ಅಷ್ಟೇ ಅಲ್ಲದೆ ಶ್ರೀವಾದಿರಾಜರು ಶ್ರೀಕೃಷ್ಣ ಮಠದ ಹಾಗೂ ಅಷ್ಟ ಮಠಗಳ ಚಟುವಟಿಕೆಗಳಲ್ಲಿ ಅನೇಕ ಕಾಲೋಚಿತ ಸುಧಾರಣೆಗಳನ್ನು ಅಳವಡಿಸಿಕೊಂಡರು ಎಂಬುದಕ್ಕೆ ಅವರ ಜೀವನದ ಅಪೂರ್ವ ಸಾಧನೆಗಳೇ ಸಾಕ್ಷಿಯಾಗಿವೆ.

ಅಷ್ಟಮಠಗಳಲ್ಲಿ ಪ್ರತಿಯೊಂದು ಮಠಕ್ಕೂ ಸಂಬಂಧಿಸಿ ಗ್ರಾಮೀಣ ಕೇಂದ್ರಗಳಲ್ಲಿ ವಿಶೇಷವಾಗಿ ಕರ್ನಾಟಕದ ಕರಾವಳಿ ಪ್ರದೇಶದಲ್ಲಿ ಮಠಮಂದಿರಗಳಿವೆ. ಉದಾಹರಣೆಗೆ ಪಲಿಮಾರು ಮಠಕ್ಕೆ ಸಂಬಂಧಿಸಿದಂತೆ ಪಲಿಮಾರು, ಕಾಂತಾವರ ಮುಂತಾದ ಸ್ಥಳಗಳಲ್ಲಿ ; ಅದಮಾರು ಮಠಕ್ಕೆ ಅದಮಾರು, ಮಣಿಪುರ, ಕಡಿಲ ಮುಂತಾದ ಸ್ಥಳಗಳಲ್ಲಿ ; ಸೋದೆ ಮಠಕ್ಕೆ, ಸೋದೆ, ಇನ್ನಂಜೆ, ಉಂಡಾರು ಮುಂತಾದ ಸ್ಥಳಗಳಲ್ಲಿ; ಪುತ್ತಿಗೆ ಮಠಕ್ಕೆ-ಪುತ್ತಿಗೆ, ತೀರ್ಥಹಳ್ಳಿ ಮುಂತಾದ ಸ್ಥಳಗಳಲ್ಲಿ ; ಪೇಜಾವರ ಮಠಕ್ಕೆ ಪೇಜಾವರ, ಪೆರ್ಣಂಕಿಲ ಮುಂತಾದ ಸ್ಥಳಗಳಲ್ಲಿ. ಪ್ರತಿಯೊಂದು ಮಠಕ್ಕೆ ಸಂಬಂಧಿಸಿದ ಪ್ರಧಾನ ಗ್ರಾಮೀಣ ಸ್ಥಳದ ಹೆಸರಿನಿಂದಲೇ ಆಯಾ ಮಠವನ್ನು ಹೆಸರಿಸುವುದು ವಾಡಿಕೆಯಾಗಿದೆ. ಎಂಟು ಮಠಗಳೂ ಧರ್ಮಪ್ರಸಾರದ ಉದ್ದೇಶದಿಂದ ಗ್ರಾಮಾಂತರ ಪ್ರದೇಶಗಳಲ್ಲಿ ಪ್ರತ್ಯೇಕ ಶಿಷ್ಯವರ್ಗಗಳನ್ನು ಬೆಳೆಸಿಕೊಂಡಿವೆ. ಆ ಮೇರೆಗೆ ಕರ್ನಾಟಕದ ಕರಾವಳಿ ಸೀಮೆಯ ಮಾಧ್ವಮತಸ್ಥರು ತಂತಮ್ಮ ಗುರುಮಠದ

ಯತಿಗಳ ಆಶೀರ್ವಾದ ಪಡೆದು ಧಾರ್ಮಿಕ ಕಾರ್ಯಗಳನ್ನು ನಡೆಸುವ ಸಂಪ್ರದಾಯ ಇಂದಿಗೂ ಉಳಿದುಕೊಂಡಿದೆ. ಗ್ರಾಮಾಂತರ ಪ್ರದೇಶಗಳಲ್ಲಿ ಅಷ್ಟಮಠಗಳ ಶ್ರೀರಕ್ಷೆಯಲ್ಲಿ ಬದುಕಿರುವ, ಅನೇಕ ದೇವಾಲಯಗಳನ್ನೂ, ಧಾರ್ಮಿಕ-ಶೈಕ್ಷಣಿಕ ಸಂಸ್ಥಾನಗಳನ್ನೂ ಕಾಣಬಹುದು. ಆ ಮಠಗಳ ಪ್ರತ್ಯಕ್ಷ ಅಥವಾ ಪರೋಕ್ಷ ಸಹಕಾರದಿಂದ ಉಡುಪಿ, ಮಂಗಳೂರು, ಬೆಂಗಳೂರು, ಹುಬ್ಬಳ್ಳಿ, ಧಾರವಾಡ, ಹೈದರಾಬಾದ್, ಮುಂಬಯಿ ಮುಂತಾದ ನಗರಗಳಲ್ಲಿ ಸ್ಥಾಪನೆಗೊಂಡಿರುವ ಧಾರ್ಮಿಕ ಶೈಕ್ಷಣಿಕ ಸಂಸ್ಥೆಗಳೂ ಸಾಕ್ಷಿವೆ.

ಅಷ್ಟಮಠಗಳ ಮೂಲಕ ನಡೆಯುವ ವೈದಿಕಧರ್ಮದ ರಕ್ಷಣೆ ಮತ್ತು ಧರ್ಮ ಪ್ರಸಾರದ ಸಲುವಾಗಿ ಹಿಂದೂರಾಜರು ಹಾಗೂ ಶ್ರೀಮಂತ ಶಿಷ್ಯರು ಅನೇಕ ವಿಧದ ದಾನ-ದತ್ತಿಗಳನ್ನು ನೀಡಿದ್ದಾರೆ. ಶ್ರೀವಾದಿರಾಜರಿಗಿಂತ ಒಂದು ಶತಮಾನದಷ್ಟು ಹಿಂದೆಯೇ ಮಠಗಳಿಗೆ ನೀಡಿದ ದಾನ-ದತ್ತಿಗಳ ಐತಿಹಾಸಿಕ ದಾಖಲೆಗಳು ಸಿಗುತ್ತವೆ. ಶ್ರೀಮಧ್ವಾಚಾರ್ಯರು ನಿರ್ಯಾಣಗೊಂಡ ಸಂಧಿಕಾಲದಲ್ಲಿ (ಕ್ರಿ.ಶ. ೧೩೧೭) ವಿಜಯನಗರ ಸಾಮ್ರಾಜ್ಯದ ಸ್ಥಾಪನೆಯಾಯಿತು (ಕ್ರಿ.ಶ. ೧೩೩೬). ಆಗ ಸಮಗ್ರ ಕರ್ನಾಟಕ ಕರಾವಳಿಯು ವಿಜಯನಗರದ ಆಳ್ವಿಕೆಗೆ ಒಳಗಾಯಿತು. ವಿಜಯನಗರ ಸಾಮ್ರಾಟರು ಅವರ ನಂತರ ಕ್ರಿ.ಶ. ೧೭೬೩ರ ವರೆಗೆ ಆಳಿದ ಕೆಳದಿನಾಯಕರು ಹಿಂದೂ ರಾಜಮನೆತನದವರಾಗಿದ್ದುದರಿಂದ, ಆ ರಾಜರ ಕಾಲದಲ್ಲಿ ಅಷ್ಟಮಠಗಳಿಗೆ ರಾಜಾಶ್ರಯ ಧಾರಾಳವಾಗಿ ದೊರೆತಿತ್ತು ಎಂದು ಊಹಿಸಬಹುದು. ವಿಜಯನಗರದ ವೆಂಕಟಪತಿರಾಯ, ಅಚ್ಯುತರಾಯ, ಸ್ವಾದಿಯ ಅರಸಪ್ಪ ನಾಯಕ, ರಾಮಚಂದ್ರನಾಯಕ – ಇವರು ಶ್ರೀವಾದಿರಾಜರಿಗಿತ್ತ ಸಹಕಾರ ಪ್ರಖ್ಯಾತವಾಗಿದೆ. ೧೮೦೦ರ ನಂತರ ಕರ್ನಾಟಕದ ಕರಾವಳಿಯು ಇಂಗ್ಲೀಷರ ಆಳ್ವಿಕೆಗೆ ಒಳಪಟ್ಟಿತು. ಅವರು ಸ್ಥಳೀಯ ಹಿಂದೂಸಾಮಂತ ರಾಜರ ಅಧಿಕಾರವನ್ನೂ ಲೋಪಗೊಳಿಸಿದ್ದರು. ಪರಧರ್ಮೀಯರಾದ ಇಂಗ್ಲೀಷ್ ಆಡಳಿತಗಾರರ ಕಾಲದಲ್ಲಿ ಅಷ್ಟಮಠಗಳ ಅನೇಕ ಧಾರ್ಮಿಕ ಚಟುವಟಿಕೆಗಳು ಕುಂಠಿತಗೊಂಡಿರಬಹುದು.

ಅಷ್ಟಮಠಗಳ ಪರಂಪರೆಯಲ್ಲಿ ಯತಿಗಳಾಗಿ ಅಥವಾ ಮಠಗಳ ಗೃಹಸ್ಥಶಿಷ್ಯರಾಗಿ ವೈದಿಕಧರ್ಮದ ಪ್ರಸಾರಕ್ಕೋಸ್ಕರ ದುಡಿದವರು ನೂರಾರು ಮಂದಿ. ಅವರಲ್ಲಿ ಮಧ್ವಾಚಾರ್ಯರ ಪೂರ್ವಾಶ್ರಮದ ಸೋದರರಾಗಿ ಸೋದೆ-ಸುಬ್ರಹ್ಮಣ್ಯ ಮಠಗಳ ಪ್ರಥಮ ಯತಿಗಳಾದ ವಿಷ್ಣುತೀರ್ಥರು. ಪಲಿಮಾರು ಮಠದ ಹೃಷೀಕೇಶತೀರ್ಥರು, ರಾಜರಾಜೇಶ್ವರರು, ರಘುವರ್ಯತೀರ್ಥರು, ರಘುಪ್ರವೀರತೀರ್ಥರು, ಸೋದೆಮಠದ ವೇದಾತ್ಮತೀರ್ಥರು, ವೇದಾಂಗತೀರ್ಥರು, ವಾದಿರಾಜತೀರ್ಥರು, ವಿಶ್ವಪ್ರಿಯತೀರ್ಥರು, ಪೇಜಾವರ ಮಠದ ಕಮಲಾಕ್ಷತೀರ್ಥರು, ವಿಜಯಧ್ವಜತೀರ್ಥರು, ವಿಶ್ವಪತಿತೀರ್ಥರು, ಶೀರೂರು ಮಠದ ಲಕ್ಷ್ಮೀಂದ್ರತೀರ್ಥರು, ಪುತ್ತಿಗೆ ಮಠದ ರಾಘವೇಂದ್ರತೀರ್ಥರು, ಸುಧೀಂದ್ರತೀರ್ಥರು, ಅದಮಾರು ಮಠದ ವಿಬುಧಪ್ರಿಯತೀರ್ಥರು, ಕೃಷ್ಣಾಪುರ ಮಠದ ವಿದ್ಯಾಧೀಶತೀರ್ಥರು- ಮುಂತಾದವರ ಗ್ರಂಥಗಳು, ಅಸಾಧಾರಣ ತಪಃಶಕ್ತಿ ಮಧ್ವ ಸಮಾಜದ ಸ್ಮರಣೆಯಲ್ಲಿ ಉಳಿದುಕೊಂಡಿವೆ. ವಿಷ್ಣುತೀರ್ಥರ ತಪಸ್ಸು ಇಂದಿಗೂ ಕುಕ್ಕೆ ಸುಬ್ರಹ್ಮಣ್ಯದ ಸನಿಹದಲ್ಲಿರುವ ಕುಮಾರ ಪರ್ವತದ ಗುಹೆಯಲ್ಲಿ ಅವಿಚ್ಛಿನ್ನವಾಗಿ ನಡೆದಿದೆ ಎಂದು ಮಧ್ವಮತಾನುಯಾಯಿಗಳ ನಂಬಿಕೆ. ಮುಂದೆ ಧರ್ಮ ಬಹಳ ಹ್ರಾಸಗೊಂಡಾಗ ವಿಷ್ಣುತೀರ್ಥರು ಕುಮಾರ ಪರ್ವತದಿಂದ ಇಳಿದು ಬಂದು ಶ್ರೀಮಧ್ವಾಚಾರ್ಯರು ಬೋಧಿಸಿದ ತತ್ವಗಳನ್ನು ಪುನಃ ಪ್ರಚುರಗೊಳಿಸುತ್ತಾರೆಂದು ಶ್ರೀವಾದಿರಾಜರು ತಮ್ಮ ''ಸರಸಭಾರತೀ ವಿಲಾಸ'' ಎಂಬ ಗ್ರಂಥದಲ್ಲಿ ಹೇಳಿರುತ್ತಾರೆ.

ಅಷ್ಟ ಮಠಗಳು ಉಚ್ಛ್ರಾಯ ಸ್ಥಿತಿಯಲ್ಲಿದ್ದಾಗ ವೇದಶಾಸ್ತ್ರಗಳ ಅಧ್ಯಯನ, ಪ್ರವಚನ, ವ್ಯಾಖ್ಯಾನ, ಗ್ರಂಥಲೇಖನ, ವಿದ್ಯಾರ್ಥಿಪೋಷಣ ಮುಂತಾದ ಕಾರ್ಯಗಳು ಅನೂಚಾನವಾಗಿ ನಡೆಯುತ್ತಿದ್ದವು.

ಅದಕ್ಕೆ ಸಾಕ್ಷಿಯಾಗಿ ಮಠಗಳಲ್ಲಿ ಏರ್ಪಟ್ಟಿರುವ ವಿಶಾಲವಾದ ವಿದ್ಯಾರ್ಥಿ ವಸತಿ ಸೌಕರ್ಯಗಳನ್ನೂ, ಅಪೂರ್ವ ಗ್ರಂಥ ಭಂಡಾರಗಳನ್ನೂ ಗಮನಿಸಬಹುದು. ಮಠಗಳ ತಾಡವಾಲೆ ಗ್ರಂಥ ಸಂಗ್ರಹದಲ್ಲಿ ಮಾಧ್ವಸಾಹಿತ್ಯದಲ್ಲಿ ಈ ತನಕ ಪ್ರಕಟವಾಗದಿರುವ ಹಲವು ಬೆಲೆಬಾಳುವ ಗ್ರಂಥಗಳಿವೆ ಎಂದು ಬಲ್ಲವರು ಹೇಳುತ್ತಾರೆ. ಆಚಾರ್ಯರ ಸಾಕ್ಷಾತ್ ಶಿಷ್ಯರಾದ ಪಲಿಮಾರು ಮಠದ ಹೃಷಿಕೇಶತೀರ್ಥರು ತುಳುಲಿಪಿಯಲ್ಲಿ ಬರೆದಿಟ್ಟಿರುವ ಆಚಾರ್ಯರ ಗ್ರಂಥಗಳ ಅತ್ಯಂತ ಪ್ರಾಚೀನ ಪಾಠವನ್ನಾಧರಿಸಿ ಸರ್ವಮೂಲ ಗ್ರಂಥಗಳು ಇತ್ತೀಚೆಗೆ ಅಖಿಲ ಭಾರತ ಮಾಧ್ವಮಹಾಮಂಡಲದಿಂದ ಪ್ರಕಟಿಸಲ್ಪಟ್ಟಿವೆ. ಅಂತಹ ಅಪ್ರಕಟಿತ ಬರವಣಿಗೆಗಳನ್ನು ಶೋಧಿಸಿ, ಸಂಪಾದಿಸಿ, ಮುದ್ರಿಸಿದರೆ ಮಾಧ್ವ ಸಾಹಿತ್ಯ ಇನ್ನಷ್ಟು ಸಂಪನ್ನವಾದೀತು: ಉಡುಪಿ ಹಾಗೂ ಅಷ್ಟಮಠಗಳ ಇತಿಹಾಸದಲ್ಲಿ ಮರೆತು ಹೋಗಿರುವ ಅನೇಕ ಅಪೂರ್ವ ವಿಷಯಗಳು ಬೆಳಕಿಗೆ ಬರಬಹುದು.

## ಉದ್ದೇಶ

ಧಾರ್ಮಿಕ-ತಾತ್ವಿಕ ಶಿಕ್ಷಣ ಮತ್ತು ತರಬೇತಿ ಹಿಂದೂ ಮಠಗಳ ಪ್ರಧಾನ ಉದ್ದೇಶ. ಮಠಗಳ ಶಿಷ್ಯವರ್ಗ ತಂತಮ್ಮ ಮನೆಗಳಲ್ಲಿ, ಸಮಾಜದಲ್ಲಿ, ದೇವಾಲಯಗಳಲ್ಲಿ ನಡೆಸಬೇಕಾದ ಧಾರ್ಮಿಕ ಕಾರ್ಯಗಳಿಗೆ ಅವಶ್ಯಕವಾದ ಸ್ವಧರ್ಮಶ್ರದ್ಧೆ, ಸ್ವಾಧ್ಯಾಯ, ಗುರುದೇವತಾ ಭಕ್ತಿ, ತಪೋನಿಷ್ಠೆ, ದೀನಾನುಕಂಪ, ಧಾರ್ಮಿಕ ಪ್ರವಚನ ಕೌಶಲ ಮುಂತಾದ ಸಾತ್ವಿಕ ಗುಣಗಳನ್ನು ಸಮಾಜದಲ್ಲಿ ವಿಶೇಷವಾಗಿ ಎಳೆಯ ಜನಾಂಗದಲ್ಲಿ ರೂಪಿಸುವ ಕಾರ್ಯ ಮಠಗಳದ್ದು. ಅಷ್ಟ ಮಠಗಳಿಗೆ ಸಮಕಾಲೀನವಾಗಿ ದಕ್ಷಿಣ ಕನ್ನಡ ಜಿಲ್ಲೆಯ ಬಾರಕೂರು, ಕಾರ್ಕಳ, ಮೂಡಬಿದ್ರೆ ಮುಂತಾದ ಕೇಂದ್ರಗಳಲ್ಲಿ ಸ್ಥಾಪನೆಗೊಂಡ ಮಾಧ್ವೇತರ ಮಠಗಳು ಆಹಾರದಾನ, ಔಷಧಿದಾನ, ಶಾಸ್ತ್ರದಾನ ಎಂಬ ಕಾರ್ಯಗಳಿಗೆ ಮೀಸಲಾಗಿದ್ದವು ಎಂಬ ವಿಚಾರ ಅವುಗಳಿಗೆ ಸಂಬಂಧಿಸಿದ ಶಿಲಾಶಾಸನಗಳಿಂದ ಸಿದ್ಧವಾಗುತ್ತದೆ. ಉಡುಪಿಯ ಅಷ್ಟ ಮಠಗಳಂತೂ ಇಂತಹ ಉದ್ದೇಶಗಳಿಗೆ ಹೊರತಾಗಿರಲಿಲ್ಲ ಎಂಬುದು ಸ್ಪಷ್ಟವಾಗಿದೆ. ಉಡುಪಿಯ ಮಠಗಳ ಅನ್ನದಾನ, ವಿದ್ಯಾರ್ಥಿ ಪೋಷಣೆ ಕರ್ನಾಟಕದಲ್ಲಿ ಎಲ್ಲ ಕಡೆ ಪ್ರಸಿದ್ಧವಾಗಿದೆ. ಉಡುಪಿಯ ಮಠಗಳ ಉದ್ದೇಶ ಯಾವ ತೆರವಾದುದು ಎಂಬುದನ್ನು ಶ್ರೀಮಧ್ವಾಚಾರ್ಯರ ಶ್ರೀವಾದಿರಾಜರ ಸಾಧನೆಗಳಿಂದ ಮತ್ತು ಬೋಧನೆಗಳಿಂದ ತಿಳಿಯಬಹುದು. ಶ್ರೀಕೃಷ್ಣನ ಪೂಜೆಗಷ್ಟೇ ಅದು ಸೀಮಿತವಾಗಿರಲಿಲ್ಲ. ಆಚಾರ್ಯರು ಸನ್ಯಾಸಾಶ್ರಮದ ಕುರಿತು ಉದಾಹರಿಸಿರುವ ಉಕ್ತಿಗಳನ್ನು ಈ ಸಂದರ್ಭದಲ್ಲಿ ಸ್ಮರಿಸಿಕೊಳ್ಳಬೇಕು. ಗೀತೆಯ ೩ನೆಯ ಅಧ್ಯಾಯದ ತಾತ್ಪರ್ಯದಲ್ಲಿ ''ವಾಚಿಕ ಮಾನಸಿಕ ಯಜ್ಞಗಳು ಸನ್ಯಾಸಿಗಳ ವಿಶೇಷ ಧರ್ಮ'' ಎಂದಿದ್ದಾರೆ. ೧೮ನೆಯ ಅಧ್ಯಾಯದ ಭಾಷ್ಯದಲ್ಲಿ ''ವಿದ್ಯಾದಾನ, ಅಭಯದಾನ, ಬ್ರಹ್ಮಚರ್ಯಾದಿ ತಪಸ್ಸ''ನ್ನು ಹೇಳಿದ್ದಾರೆ. ''ಯತಿಪ್ರಣವಕಲ್ಪ'' ಮತ್ತು ''ನ್ಯಾಸ ಪದ್ಧತಿ'' ಎಂಬ ಗ್ರಂಥಗಳಲ್ಲಿ ಯತಿಗಳ ಪ್ರಣವಜಪ ವಿಧಾನವನ್ನು ವಿವರಿಸಿ, ವೇದಾಂತ ಶಾಸ್ತ್ರಾಭ್ಯಾಸ, ಪ್ರವಚನ, ವ್ಯಾಖ್ಯಾನಾದಿಗಳೇ ಯತಿಗಳ ಮುಖ್ಯ ಧರ್ಮ ಎಂದು ಉಪದೇಶಿಸಿದ್ದಾರೆ. ಆಚಾರ್ಯರು ತನ್ನ ಸ್ವಂತ ಜೀವನದಲ್ಲಿ ಆಚರಿಸಿ ತೋರಿಸಿದ ಜ್ಞಾನನಿಷ್ಠೆಯೇ ಅವರು ಸ್ಥಾಪಿಸಿದ ಮಠಗಳ ಪ್ರಧಾನ ಉದ್ದೇಶವನ್ನು ನಿಚ್ಚಳವಾಗಿ ತಿಳಿಸುತ್ತದೆ. ಆಚಾರ್ಯರ ಬೋಧನೆಗಳನ್ನು ಶ್ರೀವಾದಿರಾಜರು ಜನಸಾಮಾನ್ಯರಿಗೂ ತಿಳಿಯುವ ಕನ್ನಡನುಡಿಯಲ್ಲಿ ಬಿತ್ತಿರಿಸಿದ್ದಾರೆ. ಅಷ್ಟೇ ಅಲ್ಲದೆ ಮಠಗಳನ್ನು ಶಿಷ್ಯ ಸಮಾಜದೊಡನೆ ನಿಕಟವಾಗಿ ಬೆಸೆಯಬಲ್ಲ ಅನೇಕ ಕಾಲೋಚಿತ ಸುಧಾರಣೆಗಳನ್ನು ವಾದಿರಾಜರು ಕೈಗೊಂಡರು. ವಿಜಯನಗರದ ಸಾಮ್ರಾಟ ಅಚ್ಯುತರಾಯನ ಸಹಕಾರದಿಂದ ಉಡುಪಿಯ ಕೃಷ್ಣ ಮಠದ ಜೀರ್ಣೋದ್ಧಾರ, ಸ್ವಾದಿ ಅರಸು ಮನೆತನದ ಸಹಕಾರದಿಂದ ಸ್ವಾದಿ ಕ್ಷೇತ್ರದ ನಿರ್ಮಾಣ, ಮಠಗಳ

ಪೂಜಾಕ್ರಮದಲ್ಲಿ ಕನ್ನಡ ಕೀರ್ತನೆಗಳ ಬಳಕೆ, ಭಾಗವತ ಧರ್ಮದ ಚೌಕಟ್ಟಿನಲ್ಲಿ ಕೋಟೇಶ್ವರ, ಮಟ್ಟು ಮುಂತಾದ ಪ್ರದೇಶಗಳ ಜನರನ್ನು ಶಿಷ್ಯರನ್ನಾಗಿ ಸ್ವೀಕರಿಸಿ ಅವರಿಗೆ ಹೊಸ ಸ್ಥಾನ ಮಾನಗಳನ್ನು ಕಲ್ಪಿಸಿ ಕೊಟ್ಟದ್ದು, ಮಾಧ್ವ ತತ್ವಜ್ಞಾನವನ್ನು ಜನಸಾಮಾನ್ಯರಿಗೂ ಮುಟ್ಟಿಸುವ ಉದ್ದೇಶದಿಂದ ಕನ್ನಡ-ತುಳು ಮುಂತಾದ ಪ್ರಾದೇಶಿಕ ಭಾಷೆಗಳಲ್ಲಿ ದೇಸಿಶೈಲಿಯ ಸಾಹಿತ್ಯ ರಚನೆ, ಅನಂತೇಶ್ವರ, ಚಂದ್ರೇಶ್ವರ ದೇವಾಲಯಗಳ ಆಡಳಿತವನ್ನು ಶ್ರೀಕೃಷ್ಣ ಮಠಕ್ಕೆ ಹೊಂದಿಕೊಳ್ಳುವಂತೆ ಅಳವಡಿಸಿಕೊಂಡದ್ದು, ಲೋಕ ರೂಢಿಯ ತಾರತಮ್ಯಕ್ಕೆ ಜೋತು ಬೀಳದೆ ಕನಕದಾಸ, ವೈಕುಂಠದಾಸರಂಥ ಸಂತರ ಅಂತರಂಗವನ್ನು ಗುರುತಿಸಿ ಗೌರವಿಸಿದ್ದು ಇವೇ ಮುಂತಾದವು ಶ್ರೀವಾದಿರಾಜರ ಅಸಾಮಾನ್ಯ ಸಾಧನೆಗಳು. ಈ ಸಾಧನೆಗಳು ಅಷ್ಟ ಮಠಗಳ ಗೊತ್ತುಗುರಿಗಳನ್ನು ತಿಳಿಸುವ ದಿಕ್‌ಸೂಚಿಯಂತಿವೆ.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ದಾಸಸಾಹಿತ್ಯದ ರಚನೆ ಮತ್ತು ಬಳಕೆಗೆ ನಾಂದಿ ಹಾಕಿದವರು ಶ್ರೀವಾದಿರಾಜರು. ಅವರ ಕಾಲದಲ್ಲಿ ಅಷ್ಟ ಮಠಗಳ ಧರ್ಮ ಪ್ರಸಾರ ಕಾರ್ಯದಲ್ಲಿ ದಾಸಸಾಹಿತ್ಯ, ಕರ್ನಾಟಕ ಸಂಗೀತ, ಹರಿಕಥಾಕಾಲಕ್ಷೇಪ, ದಶಾವತಾರ ಬಯಲಾಟದ ಮೇಳಗಳು ಮುಂತಾದ ಶಾಸ್ತ್ರೀಯ ಕಲೆಗಳಿಗೆ ಮತ್ತು ಜಾನಪದ ಕಲಾಮಾಧ್ಯಮಗಳಿಗೆ ಸಾಕಷ್ಟು ಪ್ರೋತ್ಸಾಹವಿದ್ದಿರಬೇಕು. ಅವರು ಅಷ್ಟಮಠಗಳಲ್ಲಿ ಮತ್ತು ಮಾಧ್ವಗೃಹಸ್ಥರ ಮನೆಗಳಲ್ಲಿ ತುಳಸೀ ಪೂಜೆಯ ಸಂದರ್ಭಕ್ಕಾಗಿ ರೂಢಿಗೊಳಿಸಿದ ನೃತ್ಯ ಸಹಿತ ಹರಿಸಂಕೀರ್ತನದ ಪದ್ಧತಿ, ಮಟ್ಟು ಬ್ರಾಹ್ಮಣರ ಸಲುವಾಗಿ ಪ್ರಚಾರಗೊಳಿಸಿದ ಸಂಕೀರ್ತನ ಪದ್ಧತಿಗಳು ಇಂದಿಗೂ ಉಳಿದುಕೊಂಡಿವೆ. ಮಠಗಳ ನೇತೃತ್ವದಲ್ಲಿ ಇಂತಹ ಕಲಾ ಮಾಧ್ಯಮಗಳು ಇಂದಿನ ಸಮಾಜದ ಧಾರ್ಮಿಕ ಪ್ರಜ್ಞೆಯನ್ನು ಉಳಿಸಿ ಬೆಳೆಸುವ ರೀತಿಯಲ್ಲಿ ಪುನರುಜ್ಜೀವನಗೊಂಡರೆ, ಮಠಗಳ ಧರ್ಮ ಪ್ರಸಾರ ಕಾರ್ಯಕ್ಕೆ ಹೊಸ ಕಳೆ ಬಂದೀತು. ಇದೇ ರೀತಿ ಸಮಾಜದ ಆರ್ತ ಜನರಿಗೆ ನೆರವಾಗುವ ಔಷಧಿದಾನ, ಉಚಿತ ಚಿಕಿತ್ಸೆ, ಅನಾಥ ರಕ್ಷಣೆ ಮುಂತಾದ ಹೊಸ ಕಾರ್ಯಕ್ರಮಗಳನ್ನು ರೂಪಿಸಿ, ಮಠಗಳು ವಿದ್ಯಾದಾನದ ಜತೆಗೆ ಅಭಯದಾನದ ಕೇಂದ್ರಗಳೂ ಆಗುವಂತೆ ಪ್ರಯತ್ನಿಸಬಹುದು.

**('ಉಪಾಯನ' – ತತ್ತ್ವವಾದ ಪರ್ಯಾಯ ವಿಶೇಷಾಂಕ, ಜನವರಿ – ಫೆಬ್ರವರಿ, ೧೯೮೪, ಬೆಂಗಳೂರು. ಸಂ. ಭಾರತೀರಮಣಾಚಾರ್ಯ)**

●

೧ -೨

# ಅಧ್ಯಾತ್ಮ ಪ್ರಪಂಚಕ್ಕೆ ಉಡುಪಿಯ ಕೊಡುಗೆ

ಕ್ರಿ.ಶ. ೭ನೆಯ ಶತಕದಿಂದ ೧೨ನೆಯ ಶತಕದ ತನಕ ಭಾರತದಲ್ಲಿ ತತ್ತ್ವಜ್ಞಾನದ ಒಂದು ವಿಶಿಷ್ಟ ಕ್ರಾಂತಿಯು ನಡೆಯಿತು. ಆಚಾರ್ಯ ಶಂಕರರು, ಆಚಾರ್ಯ ಭಾಸ್ಕರರು ಮತ್ತು ಆಚಾರ್ಯ ರಾಮಾನುಜರು ಈ ಕಾಲ ಘಟ್ಟದಲ್ಲಿ ತತ್ವಜ್ಞಾನದ ಪ್ರಸಾರದ ಸೂತ್ರಧಾರರಾಗಿ ನಿಂತು ತಮ್ಮ ನಿಲುವನ್ನು ಮಂಡಿಸಿದರು. ಬುದ್ಧಿಜೀವಿಗಳಾದ ವಿದ್ವಾಂಸರಲ್ಲಿ ದೊಡ್ಡ ಗೊಂದಲವೇ ಎದ್ದಿತು. ಬಿರುಸಿನ ವಾದ-ವಿವಾದಗಳು ನಡೆದವು.

ಆಚಾರ್ಯ ಶಂಕರರು ಈ ಜಗತ್ತೆಲ್ಲ ಮಿಥ್ಯೆ ; ಇದೊಂದು ಎಚ್ಚರದಲ್ಲಿ ಕಾಣುವ ಕನಸು ಎಂದರು. ಆತ್ಮವೊಂದೇ ಸತ್ಯ ಮತ್ತು ಎಲ್ಲ ದೇಹಗಳಲ್ಲು ಒಂದೇ ಆತ್ಮತತ್ವ ತುಂಬಿದೆ ಎಂದು ಸಾರಿದರು.

ಆಚಾರ್ಯ ಭಾಸ್ಕರರು ಜಗತ್ತು ಮಿಥ್ಯೆಯಲ್ಲ ಸತ್ಯ ಎಂದರು. ದೇವರು ಜೀವರಿಗಿಂತ ಭಿನ್ನ : ಆದರೆ ಜೀವರು ದೇವರಿಗಿಂತ ಭಿನ್ನವಲ್ಲ ಎಂದು ಸಾರಿದರು. ಮಣ್ಣು ಮಡಕೆಯಲ್ಲ ; ಆದರೆ ಮಡಕೆಯೆಂದರೆ ಬರಿಯ ಮಣ್ಣೆ – ಎನ್ನುವುದು ಅವರು ತನ್ನ ಭೇದಾಭೇದವಾದಕ್ಕೆ ನೀಡಿದ ಸಮರ್ಥನೆ. ಹೀಗೆ ಭಾಸ್ಕರರು ಶಂಕರರ ಮಾಯಾವಾದವನ್ನು ಬಲವಾಗಿ ಖಂಡಿಸಿದರು.

ಶಂಕರರ ಅಭೇದದಿಂದ ಭಾಸ್ಕರರ ಭೇದಾಭೇದಕ್ಕೆ ತಿರುಗಿಸಿ ವೇದಾಂತದ ವಿಚಾರಧಾರೆ ಆಚಾರ್ಯ ರಾಮಾನುಜರಿಂದ ಮತ್ತೊಂದು ಹೊಸ ತಿರುವು ಪಡೆಯಿತು. ದೇವರು ಜೀವರಿಗಿಂತ ಭಿನ್ನ ಮತ್ತು ಜೀವರು ದೇವರಿಗಿಂತ ಭಿನ್ನ ಎಂದು ಅವರು ಸಾರಿದರು. ಈ ಸತ್ಯವಾದ ಜಗತ್ತು ಅವನ ಸೃಷ್ಟಿ. ಅಂಥ ಹಿರಿಯ ತತ್ವಕ್ಕೆ ಶರಣಾಗಿ ನಾವು ಜಗತ್ತನ್ನು ಗೆದೆಯೋಣ – ಎಂದು ಅವರು ಶರಣಾಗತಿಯನ್ನು ಬೋಧಿಸಿದರು. ಈ ಮೇಲು - ಕೀಳು, ಈ ಏರು -ಪೇರು ಎಲ್ಲ ನಮ್ಮದೇ ಅಜ್ಞಾನದ ಸೃಷ್ಟಿ. ಮೋಕ್ಷದ ಸ್ಥಿತಿಯಲ್ಲಿ ಎಲ್ಲರೂ ಸಮಾನರು ಎಂದು ಅವರು ಜನರಲ್ಲಿ ಭರವಸೆ ತುಂಬಿದರು.

ಈ ಹೊಸ ವಿಚಾರಧಾರೆ ಭಾರತದಾದ್ಯಂತ ವಿದ್ವಾಂಸರನ್ನಾಕರ್ಷಿಸಿತು. ಈ ವಿಶ್ವ ಭಗವಂತನ ಶರೀರ. ಎಲ್ಲ ಜೀವರು ಕೂಡ. ನಮ್ಮ ಶರೀರವನ್ನು ನಾವು ನಮ್ಮ ಆತ್ಮದ ಜತೆಗೆ ಸಮೀಕರಿಸುತ್ತೇವೆ. ಹಾಗೆಯೇ ವೇದಗಳೂ ಭಗವಂತನನ್ನು ವಿಶ್ವಾತ್ಮ – ಎಂದು ಕರೆಯುತ್ತವೆ – ಎಂದು ಅವರು ಅದ್ವೈತಕ್ಕೆ

ನೀಡಿದ ವಿಶಿಷ್ಟವಾದ ವಿವರಣೆ ಬುದ್ಧಿಜೀವಿಗಳಿಗೆ ಮೆಚ್ಚಿಕೆಯಾಯಿತು. ಪರಿಣಾಮವಾಗಿ ಅದು ವಿಶಿಷ್ಟಾದ್ವೈತವೆಂದೇ ಪ್ರಸಿದ್ಧವಾಯಿತು.

ಹೀಗೆ ಭಾರತೀಯ ವೇದಾಂತ ಮೂರು ದಾರಿಗಳಲ್ಲಿ ಒಡೆದುಕೊಂಡಿತು. ಒಂದೊಂದು ಪಂಥದವರೂ ತಮ್ಮದೇ ಪರಮಸತ್ಯ ಎಂದು ಆವೇಶದಿಂದ ಸಮರ್ಥಿಸತೊಡಗಿದರು ; ತಮ್ಮ ಗುಂಪಿನ ಸಮರ್ಥನೆಗಾಗಿ ಗ್ರಂಥಗಳ ರಾಶಿಯನ್ನೆ ಬರೆದು ಪ್ರೇರಿಸಿದರು.

ಇದಲ್ಲದೆ ಬೌದ್ಧ ಧರ್ಮ ಸ್ವಲ್ಪಮಟ್ಟಿಗೆ ಮತ್ತು ವ್ಯಾಪಕವಾಗಿ ಜೈನಧರ್ಮ ಕರ್ನಾಟಕದಲ್ಲಿ ರಾಜಾಶ್ರಯ ಪಡೆದು ಜನಪ್ರಿಯವಾಗಿತ್ತು. ದಕ್ಷಿಣ ಕನ್ನಡ ಜಿಲ್ಲೆಯಂತು ಜೈನಧರ್ಮದ ಪ್ರಮುಖ ಕೇಂದ್ರ ಆಗಿತ್ತು. ಉತ್ತರ ಭಾರತದ ಗೋರಕ್ಷನಾಥ ಪಂಥವೂ ಕದಿರೆಯ ಮೂಲಕ ಜಿಲ್ಲೆಗೆ ಪರಿಚಿತವಾಗಿತ್ತು. ಪೊಳಲಿಯಂಥ ಕೇಂದ್ರಗಳಲ್ಲಿ ಶಾಕ್ತ ಪರಂಪರೆಯು ಆಚರಣೆಯಲ್ಲಿತ್ತು.

ಇದರ ಜತೆಗೆ ೧೩ನೆಯ ಶತಮಾನದ ತರುಣದಲ್ಲಿ ಭಾರತದಲ್ಲಿ ಕ್ರಿಶ್ಚಿಯಾನಿಟಿ ಮತ್ತು ಇಸ್ಲಾಂ ಕೂಡಾ ಸಾಕಷ್ಟು ಪರಿಚಿತವಾಗಿತ್ತು. ಉತ್ತರದಲ್ಲಿ ಇಸ್ಲಾಂ ಅರಸೊತ್ತಿಗೆ ಅಷ್ಟರಲ್ಲೆ ತಳವೂರಿಯಾಗಿತ್ತು. ಸಂತ ಥಾಮಸನಂಥ ಧರ್ಮ ಪ್ರಚಾರಕರು ಭಾರತದ ಹಲವು ಕಡೆ ಕ್ರೈಸ್ತ ಧರ್ಮಪ್ರಸಾರಕ್ಕೆ ನಾಂದಿ ಹಾಕಿದ್ದರು. ಉಡುಪಿಯ ಕಲ್ಯಾಣಪುರದಲ್ಲಿ ಆಗಲೇ ಒಂದು ಚರ್ಚು ರೂಪುಗೊಂಡಿತ್ತು ಎಂದು ತಿಳಿದು ಬರುತ್ತದೆ. ಕೆಲವರು ಈ ಹೊಸ ಧರ್ಮಗಳತ್ತ ಆಕೃಷ್ಟರಾದರು. ಕೆಲವರು ಆಸೆ ಆಮಿಷಗಳಿಗೆ ಬಲಿಯಾದರು.

ಇತ್ತ ಉತ್ತರ ಕರ್ನಾಟಕದಲ್ಲಿ ಬಸವೇಶ್ವರರು ಶೈವ ಧರ್ಮದ ಅಧ್ವರ್ಯುಗಳಾಗಿ ಜನಮನದ ನಾಡಿಯನ್ನು ಮಿಡಿದರು. ಅವರ ಕನ್ನಡದ ಆಧ್ಯಾತ್ಮ ವಚನ ಸಾಹಿತ್ಯ ವೇದಗಳಿಗಿಂತ, ಉಪನಿಷತ್ತುಗಳಿಗಿಂತ ಸುಲಭವಾಗಿ ಜನರನ್ನು ಮುಟ್ಟಿದವು; ಜನರ ಹೃದಯವನ್ನು ತಟ್ಟಿದವು. ಕನ್ನಡದ ಜನ ಸಾಮಾನ್ಯರು ಸಹಜವಾಗಿ ಇದರಿಂದ ಪ್ರಭಾವಿತರಾದರು.

ಇಂಥ ಸಂಧಿ ಕಾಲದಲ್ಲಿ ಉಡುಪಿಯಲ್ಲಿ ಒಂದು ಬೆಳಕು ಮೂಡಿ ಬಂತು. ಇಡಿಯ ವಿಶ್ವವನ್ನೇ ಬೆಳಗಬಲ್ಲ ಅಧ್ಯಾತ್ಮದ ಬೆಳಕು.

ಉಡುಪಿಯ ಸಮೀಪದ ಒಂದು ಪುಟ್ಟ ಗ್ರಾಮ ಬೆಳ್ಳೆ. ಬೆಳ್ಳೆಯಲ್ಲು ಒಂದು ಪುಟ್ಟ ಹಳ್ಳಿ ಪಾಜೆ. ಪಾಜೆ ಪಾದೆಯ ಪೂರ್ವ ರೂಪ. ಪಾದೆಕಲ್ಲುಗಳ ಕಿರಿ ಬೆಟ್ಟಗಳಿಂದ ಏರುಪೇರಾದ, ಅತ್ಯಂತ ಸುಂದರವಾದ ಹಳ್ಳಿ ಪಾಜೆ. ಈಗಣ ಪಾಜಕ ಕ್ಷೇತ್ರ. ಕ್ರಿ.ಶ. ೧೨೩೮ರಲ್ಲಿ ಈ ಹಳ್ಳಿಯಲ್ಲಿ ಒಂದು ಮಗು ಜನಿಸಿತು. ತಂದೆ ತೌಳವ ಮನೆತನದ ನಡಿಲ್ಲಾಯರು, ತಾಯಿಯ ಹೆಸರು ಇತಿಹಾಸದಲ್ಲಿ ದಾಖಲೆಯಾಗಿಲ್ಲ. ಕೆಲವರು ಆಕೆಯನ್ನು 'ವೇದವತಿ' ಎಂದು ಕರೆದಿದ್ದಾರೆ. ತಂದೆಯ ಹೆಸರು 'ನಾರಾಯಣ ಭಟ್ಟ' ಎಂದಿರಬಹುದು ಎನ್ನುವುದು ಒಂದು ಊಹೆ.

ಮಗುವಿನ ಬಾಲ್ಯದ ಹೆಸರು ವಾಸುದೇವ. ಮುಂದೆ ಅಚ್ಯುತಪ್ರಜ್ಞರಲ್ಲಿ ಸನ್ಯಾಸ ದೀಕ್ಷೆ ಪಡೆದಾಗ ಇಟ್ಟ ಹೆಸರು ಪೂರ್ಣಪ್ರಜ್ಞ. ಗುರುವಿನ ವೇದಾಂತ ಸಾಮ್ರಾಜ್ಯದಲ್ಲಿ ಅಭಿಷಿಕ್ತರಾದಾಗ ಬಂದ ಹೆಸರು ಆನಂದತೀರ್ಥ. ಆಚಾರ್ಯರು ತಾನೇ ತನ್ನನ್ನು ಕರೆದುಕೊಂಡ ವೈದಿಕ ಹೆಸರು – ಮಧ್ವ.

೧೩ನೆಯ ಶತಕದ ತರುಣದಲ್ಲಿ ಉಡುಪಿ ಅಂಥ ಸಾಂಸ್ಕೃತಿಕ ಕೇಂದ್ರವೇನೂ ಅಲ್ಲ. ಪ್ರಸಿದ್ಧವಾದ ಅನಂತೇಶ್ವರ ದೇವಾಲಯ ಆಗಲೂ ಒಂದು ಯಾತ್ರಾಕೇಂದ್ರವಾಗಿತ್ತು. ಜತೆಗೆ ಉತ್ತರ ಭಾರತದಿಂದ ವಲಸೆ ಬಂದ ಯತಿ ಅಚ್ಯುತ ಪ್ರಜ್ಞರು (ಮಧ್ವವಿಜಯದ ಶ್ಲೋಕದಿಂದ ಭ್ರಾಂತರಾದ ಕೆಲವರು ಇವರನ್ನು ಅಚ್ಯುತ ಪ್ರೇಕ್ಷರು ಎಂದು ತಪ್ಪಾಗಿ ಕರೆಯುತ್ತಾರೆ. ಅವರ ನಿಜವಾದ ಹೆಸರು ಅಚ್ಯುತಪ್ರಜ್ಞ ಎಂದು) ಇಲ್ಲಿ ನೆಲೆಸಿದ್ದು ಅನಂತೇಶ್ವರದಲ್ಲಿ ಒಂದು ಪುಟ್ಟ ಗುರುಕುಲವನ್ನು ನಡೆಸುತ್ತಿದ್ದರು. ವೈದಿಕರಿಗೆ ಪೌರೋಹಿತ್ಯ

ಮತ್ತು ಪುರಾಣಗಳೇ ಪ್ರಧಾನ ವೃತ್ತಿಗಳಾಗಿದ್ದವು. ಆಚಾರ್ಯ ಮಧ್ವರ ತಂದೆ ನಡಿಲ್ಲಾಯರೂ ಆ ಕಾಲದ ಖ್ಯಾತ ಪೌರಾಣಿಕರಾಗಿದ್ದರು. ಪಂಚಾಯತನ ಪೂಜೆಯ ಭಾಗವತ ಸಂಪ್ರದಾಯ ಹೆಚ್ಚು ಆಚರಣೆಯಲ್ಲಿತ್ತು. ಇಂಥ ಸಮ್ಮುಗ್ಧ ವಾತಾವರಣದಲ್ಲಿ ಆಚಾರ್ಯ ಮಧ್ವರು ಆಧ್ಯಾತ್ಮ ವಾಙ್ಮಯಕ್ಕೆ ಒಂದು ಹೊಸ ಆಯಾಮವನ್ನು ನೀಡಿದರು, ವೈದಿಕ ಪರಂಪರೆಯಲ್ಲಿ ಕಾಳನ್ನು ತೂರಿ ಜೊಳ್ಳನ್ನು' ಅತುಕೊಂಡಿದ್ದ ಜನಕ್ಕೆ ನಿಜವಾದ ಸತ್ಯವನ್ನು ತೋಳಿತ್ತಿ ಸಾರಿದರು.

ತುಳುನಾಡಿನ ಭಾಗ್ಯ ದೊಡ್ಡದು ; ಉಡುಪಿಯ ಭಾಗ್ಯ ದೊಡ್ಡದು. ಅದಕ್ಕೆಂದೇ ಆಚಾರ್ಯ ಮಧ್ವರು ತನ್ನ ಜನನಕ್ಕಾಗಿ ಈ ನೆಲವನ್ನು ಆರಿಸಿಕೊಂಡರು. ಅವರು ಈ ನೆಲದಲ್ಲಿ ಹಚ್ಚಿದ ಪಂಜು ಇಡಿಯ ಭಾರತದ ಆಧ್ಯಾತ್ಮಿಕ ಪ್ರಪಂಚಕ್ಕೆ ಹೊಸ ಬೆಳಕನ್ನು ನೀಡಿತು. ಆದರೆ ನಮ್ಮ ದುರ್ದೈವ ಇನ್ನೂ ದೊಡ್ಡದು. ಕಣ್ಣುಮುಚ್ಚಿ ಕುಳಿತವನಿಗೆ ಯಾವ ಬೆಳಕೂ ಕಾಣುವುದಿಲ್ಲ. ಕಿಟಕಿಬಾಗಿಲು ಜಡಿದು ಮನೆಯೊಳಗೆ ಭದ್ರವಾಗಿ ಕೂತವನಿಗೆ ಗಾಳಿಯೂ ಇಲ್ಲ , ಬೆಳಕೂ ಇಲ್ಲ.

ಆಚಾರ್ಯ ಮಧ್ವರು ನೀಡಿದ ಹೊಸ ಬೆಳಕು ಏನು ? ಇಂದಿಗೂ ಕೂಡ ಅದು ಎಷ್ಟು ಮಹತ್ವಪೂರ್ಣ ಎನ್ನುವುದನ್ನು ಸ್ವಲ್ಪ ವಿಚಾರಿಸೋಣ.

ಈ ಮೊದಲೇ ಹೇಳಿದಂತೆ ಆಚಾರ್ಯರು ದೀಕ್ಷೆ ಪಡೆದದ್ದು ಒಬ್ಬ ಅದ್ವೈತ ಸಂಪ್ರದಾಯವನ್ನು ಅನುಸರಿಸಿಕೊಂಡು ಬಂದ ಯತಿಗಳಲ್ಲಿ. ಅವರು ಬಾಲ್ಯದಲ್ಲಿ ಅಧ್ಯಯನ ಮಾಡಿದ್ದು ಆಗ ಬಳಕೆಯಲ್ಲಿದ್ದ ಅದ್ವೈತ ಗ್ರಂಥಗಳನ್ನು. ವಾತಾವರಣದ ಶಿಶುವಾಗಿ ಬೆಳೆಯುತ್ತಿದ್ದರೆ ಅವರೊಬ್ಬ ಪ್ರಚಂಡ ಅದ್ವೈತ ವಿದ್ವಾಂಸನಾಗಿ ರೂಪುಗೊಳ್ಳಬೇಕಿತ್ತು. ಆದರೆ ಅವರ ಅಸಾಮಾನ್ಯವಾದ ಪ್ರಜ್ಞಾಶಕ್ತಿ ಆ ಕಾಲದ ನಂಬಿಕೆಯನ್ನು ಕಣ್ಮುಚ್ಚಿ ಒಪ್ಪಿಕೊಳ್ಳಲು ಸಿದ್ಧವಾಗಲಿಲ್ಲ. ಅವರು ತಮ್ಮ ಗುರುಗಳ ನಂಬಿಕೆಯನ್ನೇ ಪ್ರಶ್ನಿಸಿದರು. ಅವರು ಅವರ ಕಾಲಕ್ಕಿಂತ ಬಹಳ ಮುಂದಿದ್ದರು. ಉಳಿದವರಿಗೆ ಆ ಎತ್ತರವನ್ನು ಗುರುತಿಸುವುದೂ ಅಸಾಧ್ಯವಾಯಿತು. ಅವರ ಗುರುವಿಗೇ ಈ ಶಿಷ್ಯನ ಪ್ರಜ್ಞಾ ವಿಸ್ತಾರ ನುಂಗಲಾರದ ತುತ್ತಾಯಿತು. ಆಚಾರ್ಯರು ವಾತಾವರಣದಿಂದ ಪ್ರಭಾವಿತರಾಗುವ ಬದಲು ವಾತಾವರಣದ ಮೇಲೆಯೇ ತನ್ನ ಪ್ರಭಾವವನ್ನು ಬೀರಿದ ಅಪೂರ್ವ ವ್ಯಕ್ತಿಯಾದರು ; ಇತಿಹಾಸ ನಿರ್ಮಿಸಿದ ಅವತಾರ ಪುರುಷರಾದರು.

ಅವರ ಸಿದ್ಧಾಂತದ ಅಪೂರ್ವ ಕೊಡುಗೆಗಳ ಬಗೆಗೆ ಯೋಚಿಸುವ ಮುನ್ನ ಅವರ ಜೀವನದ ಒಂದು ಅವಿಸ್ಮರಣೀಯ ಘಟನೆಯನ್ನು ಇಲ್ಲಿ ಉಲ್ಲೇಖಿಸಬೇಕು.

ಆಚಾರ್ಯ ಮಧ್ವರು ಉತ್ತರ ಭಾರತ ಸಂಚಾರದಲ್ಲಿದ್ದರು. ಪಯಣ ಮುಂದೆ ಸಾಗಲು ಗಂಗಾ ನದಿ ದಾಟಬೇಕಿತ್ತು. ನದಿಯ ಈಚೆ, ಆಚಾರ್ಯರಿದ್ದ ಕಡೆ ಹಿಂದೂ ರಾಜನ ಆಡಳಿತ. ಆಚೆಯ ದಡದಲ್ಲಿ ಮುಸ್ಲಿಂ ರಾಜನ ಆಡಳಿತ. ಪರಿಣಾಮವಾಗಿ ಈ ಕಡೆಯಿಂದ ಆ ಕಡೆಗೆ ನದೀ ಸಂಚಾರ ನಿಷಿದ್ಧವಾಗಿತ್ತು. ನದಿಯ ಆಚೆಯ ತಡಿಯಲ್ಲಿ ಮುಸ್ಲಿಂ ಸೈನಿಕರ ಪಹರೆ ಬಲವಾಗಿತ್ತು.

ಆಚಾರ್ಯರು ಧೈರ್ಯವಾಗಿ ನದಿಗಿಳಿದರು. ಶಿಷ್ಯರು ಅವರನ್ನನುಸರಿಸಿದರು. ಆ ಕಡೆಯಿಂದ ಸೈನಿಕರು ಕೂಗಿ ಕರೆದರು. ಆಚಾರ್ಯರು ಶಾಂತರಾಗಿಯೆ ಕೈಬೀಸಿ ಉತ್ತರಿಸಿದರು. ''ಹೆದರಿ ನದಿಗೆ ಹಾರಬೇಡಿ. ಧೈರ್ಯವಾಗಿರಿ. ನಾವೇನು ನಿಮ್ಮ ಶತ್ರುಗಳಲ್ಲ.'' ಸೈನಿಕರು ಆಚಾರ್ಯರನ್ನು ಹೆದರಿಸಬಂದರೆ ಆಚಾರ್ಯರು ಸೈನಿಕರಿಗೇ ಧೈರ್ಯ ಹೇಳಿದರು.

ಸೈನಿಕರು ಕಣ್‌ಕಣ್ ಬಿಡುತ್ತಿದ್ದಂತೆ ಆಚಾರ್ಯರು ಆಚೆಯ ದಡ ಸೇರಿದರು. ದಿಗ್ಭ್ರಾಂತರಾದ ಸೈನಿಕರು ಸುತ್ತುವರಿದು ಆಚಾರ್ಯರನ್ನು ದೊರೆಯ ಬಳಿಗೆ ಕೊಂಡೊಯ್ದರು. ( ಈ ದೊರೆ ಖಿಲ್ಜಿ ಎಂದು ಕೆಲವರ ಅಭಿಪ್ರಾಯ; ಬಲ್ಬನ್ ಇರಬೇಕು ಎಂದು ಇನ್ನು ಕೆಲವರ ಅಭಿಪ್ರಾಯ) ಮುಸ್ಲಿಂ ದೊರೆ

ಆಚಾರ್ಯರನ್ನು ಪ್ರಶ್ನಿಸಿದ: ''ಇಷ್ಟು ಬಿಗಿಯಾದ ಸೈನಿಕ ಪಹರೆಯಿದ್ದಾಗಲೂ ನಿಮಗೆ ನನ್ನ ರಾಜ್ಯವನ್ನು ಪ್ರವೇಶಿಸುವ ಧೈರ್ಯ ಹೇಗೆ ಬಂತು ?''

ಆಚಾರ್ಯರು ಶಾಂತರಾಗಿ ನಗುತ್ತಲೇ ಉತ್ತರಿಸಿದರು. ''ನಾನೇಕೆ ಹೆದರಬೇಕು ? ನಿನ್ನ ದೇವರು ಬೇರಲ್ಲ, ನನ್ನ ದೇವರು ಬೇರಲ್ಲ. ಎಲ್ಲ ಭಾಷೆಯ ಎಲ್ಲ ಶಬ್ದಗಳೂ ಒಬ್ಬನೇ ದೇವರನ್ನು ಸ್ತುತಿಸುತ್ತವೆ ಎಂದ ಮೇಲೆ ನಾವೆಲ್ಲರೂ ಒಬ್ಬ ದೇವನ ಮಕ್ಕಳು. ವಸ್ತುಸ್ಥಿತಿ ಹೀಗಿರುವಾಗ ದ್ವೇಷವೇಕೆ ? ಯಾರ ಹೆದರಿಕೆ ?''

ದೊರೆ ವಿಸ್ಮಿತನಾದ. ಒಬ್ಬ ಹಿಂದೂ ಸನ್ಯಾಸಿಯ ಬಾಯಿಯಿಂದ ಮೊದಲ ಬಾರಿಗೆ ಆತ ಇಂಥ ಮಾತನ್ನು ಕೇಳುತ್ತಿದ್ದಾನೆ ! ಅವನಿಗೆ ಆಚಾರ್ಯರ ಬಗ್ಗೆ ಅಪಾರವಾದ ಗೌರವ ಮೂಡಿತು. ಅವನು ನುಡಿದ : ''ನಿಮ್ಮ ಮಾತು ನಿಜ. ನಾವು ಧರ್ಮದ ಹೆಸರಿನಲ್ಲಿ ಪರಸ್ಪರ ದ್ವೇಷಿಸುವುದರಲ್ಲಿ ಯಾವ ಅರ್ಥವೂ ಇಲ್ಲ. ನೀವು ಇಲ್ಲೇ ಇರಬಯಸುವುದಾದರೆ ನೀವು ಬಯಸಿದಷ್ಟು ಜಹಗೀರನ್ನು ನಾನು ಒದಗಿಸುತ್ತೇನೆ. ನಿಮ್ಮಂಥ ವಿರಾಗಿಗಳು ನಮ್ಮ ರಾಜ್ಯದಲ್ಲೇ ಇರಬೇಕು.''

ಮತ್ತೆ ಆಚಾರ್ಯರು ಶಾಂತರಾಗಿ ಉತ್ತರಿಸಿದರು. ''ದೊರೆಯೇ ನಮಗೆ ಯಾವ ಜಹಗೀರಿನ ಆಸೆಯೂ ಇಲ್ಲ. ನಾವು ಪ್ರಾಪಂಚಿಕ ಮೋಹವನ್ನು ತೊರೆದು ಸನ್ಯಾಸಿಗಳಾದವರು. ನಾವು ಬದರೀ ಯಾತ್ರೆಗೆ ಹೊರಟಿದ್ದೇವೆ. ನಿನ್ನ ಸೈನಿಕರು ಅಡ್ಡಿಮಾಡದೆ ಇದ್ದರೆ ಅದೇ ನೀನು ಮಾಡಬಹುದಾದ ದೊಡ್ಡ ಉಪಕಾರ.''

ಈ ಕಥೆ ಆಚಾರ್ಯರ ಸಿದ್ಧಾಂತದ ಬಗ್ಗೆ ಹೊಸ ಬೆಳಕನ್ನು ನೀಡುತ್ತದೆ. ೧೩ನೆಯ ಶತಕದಷ್ಟು ಮೊದಲೆ ಆಚಾರ್ಯರು ಘೋಷಿಸಿದರು. ''ಎಲ್ಲ ಭಾಷೆಯ ಎಲ್ಲ ನಾಮಗಳೂ ದೇವರ ಹೆಸರುಗಳೇ. ದೇವರನ್ನು ಯಾವ ಹೆಸರಿನಿಂದ ಕರೆದರೂ ಸರಿಯೆ. ಏಕೆಂದರೆ ದೇವರ ಹೆಸರಿಲ್ಲದ ಯಾವ ಶಬ್ದವೂ ಈ ಪ್ರಪಂಚದಲ್ಲಿಲ್ಲ.''

ಇದು ಆಚಾರ್ಯರ ಸಿದ್ಧಾಂತದ ಒಂದು ಮೂಲಭೂತ ತತ್ವ. ಈ ಸಂದೇಶವನ್ನು ಜಗತ್ತಿಗೆ ಸಾರಿದ ಆಚಾರ್ಯ ಪುರುಷರಲ್ಲಿ ಆಚಾರ್ಯ ಮಧ್ವರೇ ಮೊದಲಿಗರು. ಇದು ತತ್ವಜ್ಞಾನ ಪ್ರಪಂಚಕ್ಕೆ ಆಚಾರ್ಯರ ಅಭೂತಪೂರ್ವ ಕೊಡುಗೆ.

ಇಂದು ನಾವು ''ಈಶ್ವರ ಅಲ್ಲಾ ತೇರೇ ನಾಮ್'' ಎಂದು ಹೇಳಿ ಎಲ್ಲವನ್ನೂ ಮರೆಯುತ್ತೇವೆ. ಇದೇನೋ ಇಪ್ಪತ್ತನೆಯ ಶತಮಾನದ ಹೊಸ ಕೊಡುಗೆ ಎನ್ನುವಂತೆ ಮಾತಾಡುತ್ತೇವೆ, ಆದರೆ ಈ ಸತ್ಯವನ್ನು ಅನನ್ಯವಾದ ರೀತಿಯಲ್ಲಿ ೭೦೦ ವರ್ಷಗಳಷ್ಟು ಹಿಂದೆಯೆ ಆಚಾರ್ಯ ಮಧ್ವರು ಸಾರಿದರು ಎನ್ನುವುದು ಎಷ್ಟು ಜನಕ್ಕೆ ತಿಳಿದಿದೆ !

ದೇವರ ಅಸ್ತಿತ್ವದ ಬಗ್ಗೆ ಹೇಳುತ್ತ ಆಚಾರ್ಯರು ಒಂದೆಡೆ ಹೀಗೆ ನಮ್ಮನ್ನು ಎಚ್ಚರಿಸುತ್ತಾರೆ : ''ಸಾವಿರ ಸಾವಿರ ವರ್ಷಗಳ ಸಾಧನೆಯ ಫಲವಾಗಿ ಕಂಡುಕೊಂಡ ಸತ್ಯವನ್ನು ನಿನ್ನ ಅಜ್ಞಾನದ ಅಸ್ತ್ರವನ್ನು ಬಳಸಿ ಖಂಡಿಸಬೇಡ. ತರ್ಕ, ಲಾಜಿಕ್ಕು ಮನುಷ್ಯನನ್ನು ಎಲ್ಲಿಗೂ ಕೊಂಡೊಯ್ಯುವುದಿಲ್ಲ. ನೀನು ನಾಸ್ತಿಕನಾದರೆ ನಿನ್ನ ತರ್ಕಗಳೆಲ್ಲ ನಾಸ್ತಿಕ್ಯದತ್ತ ವಾಲುತ್ತದೆ. ಆಸ್ತಿಕನಾದರೆ ಆಸ್ತಿಕ್ಯದತ್ತ. ತರ್ಕ ಸತ್ಯವನ್ನು ಸಮರ್ಥಿಸುವುದಿಲ್ಲ. ನಿನ್ನ ನಂಬಿಕೆಯನ್ನಷ್ಟೆ ಸಮರ್ಥಿಸುತ್ತದೆ. ವಾಸ್ತವವಾಗಿ ತರ್ಕದಿಂದ ಏನನ್ನೂ ಸಾಧಿಸಬರುವುದಿಲ್ಲ. ಏಕೆಂದರೆ ತರ್ಕದಿಂದ ಏನನ್ನೂ ಸಾಧಿಸಬಹುದು.''

ನಮ್ಮ ಬುದ್ಧಿಯ ಚಿಂತನಶಕ್ತಿಗೆ ಒಂದು ಎಲ್ಲೆ ಇದೆ. ಬುದ್ಧಿಯ ನಿರ್ಮಾಣವಾದ ತರ್ಕವೂ ಬುದ್ಧಿಯ ಎಲ್ಲೆಯನ್ನು ಮೀರಿ ಹೋಗಲಾರದು. ನಮ್ಮ ಬುದ್ಧಿಗೂ ಎಟುಕದ ಅನೇಕ ಸತ್ಯಗಳು ಜಗತ್ತಿನಲ್ಲಿವೆ. ಮನುಷ್ಯ ಅಂಥ ಸತ್ಯಗಳನ್ನು ನಿರಂತರ ಸಾಧನೆಯಿಂದ ಅಂತರಂಗದ ಆತ್ಮಸಾಕ್ಷಿಯಿಂದ ಅನುಭವಿಸಬಲ್ಲ. ಅಂಥ ಅನುಭವಕ್ಕೆ ಶರಣಾಗು ಎಂದರು ಆಚಾರ್ಯರು.

ಬರಿಯ ಶಾಸ್ತ್ರ ವಾಕ್ಯಗಳು ಪಾಂಡಿತ್ಯದ ಪ್ರದರ್ಶನಕ್ಕಾಯಿತು. ಬರಿಯ ತರ್ಕ ನಮ್ಮನ್ನು ಎಲ್ಲಿಗೂ ಒಯ್ಯುವುದಿಲ್ಲ ಅಥವಾ ಎಲ್ಲಿಗೂ ಒಯ್ಯಬಹುದು. ಅದಕ್ಕೊಂದು ಖಚಿತವಾದ ಸಿದ್ಧಾಂತವಿಲ್ಲ. ಆತ್ಮ ಸಾಕ್ಷಿ – ಅನುಭವ ಮಾತ್ರವೇ ನಿಜವಾದ ಸತ್ಯವನ್ನು ತಿಳಿಸಬಲ್ಲವು. ಶಾಸ್ತ್ರದಲ್ಲಿ ಹೇಳಿದುದನ್ನು ಅನುಭವ ದಿಂದ ಆತ್ಮಸಾತ್ ಮಾಡಿಕೋ – ಎಂದು ಆಚಾರ್ಯರು ಹಿತವಚನ ನುಡಿಯುತ್ತಾರೆ. ತರ್ಕದ ಮೇಲೆ ಅತಿಯಾಗಿ ಒತ್ತುಕೊಟ್ಟು ಅತಿವಾದ ಮಾಡುವ ಮಂದಿ ಈ ಮಾತಿನತ್ತ ಗಮನ ಹರಿಸುವುದು ಅಗತ್ಯ .

ಆಚಾರ್ಯರ ತತ್ತ್ವಜ್ಞಾನದ ಇನ್ನೆರಡು ಮುಖ್ಯ ಅಂಶಗಳು **ಜೀವಸ್ವಭಾವವಾದ** ಮತ್ತು **ತಾರತಮ್ಯವಾದ**. ಇದರ ಬಗ್ಗೆ ಸಾಕಷ್ಟು ತಪ್ಪು ತಿಳಿವಳಿಕೆಗಳು ಬೆಳೆದಿವೆ. ವಾಸ್ತವ ದೃಷ್ಟಿಯಿಂದ ಇದರ ಹಿನ್ನೆಲೆಯನ್ನು ಅರಿಯಲು ಯಾರೂ ಪ್ರಯತ್ನಿಸಲೇ ಇಲ್ಲ. ಅದರಿಂದಲೇ ಈ ಸಿದ್ಧಾಂತದ ವೈಜ್ಞಾನಿಕ ಮಹತ್ತ್ವ ಬಹಳ ಜನಕ್ಕೆ ಅರಿವಾಗದೆಯೆ ಉಳಿದಿದೆ. ಈ ಮಾತನ್ನು ಸ್ವಲ್ಪ ವಿಶ್ಲೇಷಿಸೋಣ.

ಎಲ್ಲ ಜೀವರೂ ಮೂಲತಃ ಜ್ಞಾನಾನಂದ ಸ್ವರೂಪರು. ಈ ಸುಖ - ದುಃಖಗಳ ತಾರತಮ್ಯ ಕರ್ಮ ನಿರ್ಮಿತವಾದದ್ದು. ಕರ್ಮದ ಬಂಧನ ಹರಿದಾಗ ಮತ್ತೆ ಮೂಲ ರೂಪವನ್ನು ಪಡೆಯುತ್ತಾರೆ ಎಂದು ಎಲ್ಲ ವೇದಾಂತಿಗಳೂ ಹೇಳುತ್ತಾರೆ. ಆದರೆ ಆಚಾರ್ಯ ಮಧ್ವರು ಈ ವಾದವನ್ನು ವಿರೋಧಿಸಿದರು.

ಆಚಾರ್ಯರಿಗಿಂತ ಮೊದಲಿನ ವೇದಾಂತಿಗಳೆಲ್ಲ ಒಂದು ಮೂಲಭೂತ ಅಂಶವನ್ನು ಮರೆತೇ ಮಾತಿನ ಮಂಟಪ ಬೆಳೆಸಿದ್ದಾರೆ. ಪಂಚಾಂಗವನ್ನು ಗಮನಿಸದೆಯೆ ಎತ್ತರವಾದ ಮಹಲನ್ನು ಕಟ್ಟಿಬಿಟ್ಟಿದ್ದಾರೆ. ಆಚಾರ್ಯರು ಪಂಚಾಂಗದ ಬಗ್ಗೆಯೆ ಪ್ರಯತ್ನಿಸಿದರು.

ಈಗಿರುವ ಸುಖ - ದುಃಖಗಳ ಏರುಪೇರಿಗೆ ಜೀವದ ಹಿಂದಿನ ಕರ್ಮ ಕಾರಣವೆಂದಾದರೆ ಮೊತ್ತ ಮೊದಲ ಕರ್ಮ ಏತರದಿಂದ ಆಯಿತು ? ಮುಂದಿನ ಬೆಳವಣಿಗೆಗಳಿಗೆಲ್ಲ ಪಂಚಾಂಗವಾದ ಆ ಮೊದಲ ಕರ್ಮವನ್ನು ನಿಯಂತ್ರಿಸುವ ಶಕ್ತಿ ಯಾವುದು? ಪಕ್ಷಪಾತವಿಲ್ಲದ ದೇವರು ಒಬ್ಬನಿಗೆ ಸುಖ, ಒಬ್ಬನಿಗೆ ದುಃಖ ಕೊಡುವ ಕೆಲಸ ಮಾಡಲಾರನಲ್ಲ. ಪ್ರಾಚೀನ ಆಚಾರ್ಯರು ಇದಕ್ಕೆ ಏನು ಉತ್ತರ ನೀಡುತ್ತಾರೆ ?

ಈ ಸಮಸ್ಯೆಯನ್ನು ಮೊತ್ತಮೊದಲ ಬಾರಿ ಆಚಾರ್ಯ ಮಧ್ವರು ಪರಿಹರಿಸಿದರು. ಈ ಸಮಸ್ಯೆಯ ಪರಿಹಾರಕ್ಕಾಗಿ ಆಚಾರ್ಯರು ಮುಂದುವರಿಸಿದ ಪ್ರಮೇಯವೆ ಜೀವ ಸ್ವಭಾವವಾದ.

ಜೀವಕ್ಕೆ ಒಂದು ಸ್ವಂತವಾದ ಸ್ವಭಾವವಿದೆ. ಅದು ಸಾತ್ವಿಕ - ರಾಜಸ ತಾಮಸ ಎಂದು ಮೂರು ವಿಧ. ಅಂಥ ಜೀವ ತನ್ನ ಸ್ವಭಾವಕ್ಕೆ ತಕ್ಕಂತೆಯೆ ಮೊದಲ ಕರ್ಮದಲ್ಲಿ ತೊಡಗುತ್ತದೆ. ಅದರಂತೆಯೆ ಬೆಳೆಯುತ್ತದೆ. ಹೊರಗಿನ ಪ್ರಭಾವದಿಂದ ಬಂದ ಏರು-ಪೇರುಗಳು ಬದಲಾಗಬಹುದು, ಆದರೆ ಸ್ವಭಾವ ಬದಲಾಗದು. ಅದು ಕೊನೆಯ ತನಕವೂ ಉಳಿಯುವಂಥದು .

ಅಂತೆಯೆ ತಾರತಮ್ಯವಾದ, ಈ ತಾರತಮ್ಯ ಸೃಷ್ಟಿಯ ಮೂಲಭೂತ ತತ್ತ್ವ. ಈ ಜಗತ್ತಿನಲ್ಲಿ ಯಾವುದೂ ಒಂದರಂತೆ ಇನ್ನೊಂದಿಲ್ಲ. ಒಂದೇ ಮರದ ಎರಡು ಎಲೆಗಳು ಸೂಕ್ಷ್ಮವಾಗಿ ನೋಡಿದರೆ ಒಂದರಂತೆ ಒಂದಿಲ್ಲ. ಅದರಿಂದ ಎಲ್ಲರೂ ಸಮಾನರು ಏಕರೂಪರು ಎನ್ನುವ ಸಿದ್ಧಾಂತ ಪ್ರಕೃತಿಯ ನಿಯಮಕ್ಕೇ ವಿರುದ್ಧವಾದದ್ದು.

ಇದರಿಂದ ಮೋಕ್ಷದ ಕಲ್ಪನೆಯಲ್ಲೂ ಆಚಾರ್ಯರು ಆ ತನಕದ ಪರಂಪರೆಯಿಂದ ಭಿನ್ನವಾಗಿ ನಿಂತರು.

ಶಂಕರರಂದಂತೆ ಎಲ್ಲರೂ ಒಂದಾಗುವುದಾಗಲಿ, ರಾಮಾನುಜರಂದಂತೆ ಎಲ್ಲರೂ ಒಂದೇ ರೀತಿಯಾಗುವುದಾಗಲಿ ಮೋಕ್ಷವಲ್ಲ – ಅದು ಜೀವನದ ದೊಡ್ಡ ದುರಂತ ಎಂದು ಆಚಾರ್ಯರು ಪರಿಹಾಸ ಮಾಡುತ್ತಾರೆ.

ಒಬ್ಬನು ಇನ್ನೊಬ್ಬನಾಗುವುದಾಗಲಿ, ಇನ್ನೊಬ್ಬನಂತಾಗುವುದಾಗಲಿ ಪ್ರಿಯವಾಗುವ

ಸಂಗತಿಯೇನಲ್ಲ. ನಾನು ನನ್ನ ವ್ಯಕ್ತಿತ್ವವನ್ನು ಬೆಳೆಸಿಕೊಂಡು ಪೂರ್ಣವಾಗಿ ವಿಕಾಸಗೊಳ್ಳಬೇಕು. ಅದೇ ನನ್ನ ಮೋಕ್ಷ. ಅವರವರ ಪೂರ್ಣತೆಯು ಅವರವರ ಮೋಕ್ಷ. ಅದರಿಂದ ಮೋಕ್ಷದಲ್ಲಿ ತಾರತಮ್ಯವಿದೆ ಎನ್ನುವ ಕ್ರಾಂತಿಕಾರಿ ಸಿದ್ಧಾಂತವನ್ನು, ಮೋಕ್ಷದಲ್ಲಿ ವ್ಯಕ್ತಿತ್ವ ವಾದವನ್ನು ಮೊತ್ತಮೊದಲು ಮಂಡಿಸಿದ ಕೀರ್ತಿ ಆಚಾರ್ಯ ಮಧ್ವರಿಗೆ. ಆ ಮೂಲಕ ಉಡುಪಿಯ ನೆಲಕ್ಕೆ ಸಲ್ಲಬೇಕು.

ಪೂರ್ಣತೆ ಕೂಡ ಸಾಪೇಕ್ಷ ವಸ್ತು. ಬೇರೆ ಬೇರೆ ಗಾತ್ರದ ಹತ್ತು ಪಾತ್ರೆಗಳನ್ನಿಟ್ಟು ನೀರು ತುಂಬಿದರೆ ಎಲ್ಲವೂ ಪೂರ್ಣ. ಆದರೆ ತುಂಬಿದ ನೀರು ಏಕರೂಪವಲ್ಲ. ಜೀವದ ಸ್ಥಿತಿಯೂ ಹಾಗೆ.

ಒಬ್ಬೊಬ್ಬರ ಪಾತ್ರ ಒಂದೊಂದು ಗಾತ್ರ. ನನ್ನ ಸಾಧನೆ ಬೇರೆ ; ನನ್ನ ಸಿದ್ಧಿ ಬೇರೆ. ನಿಮ್ಮ ಸಾಧನೆ ಬೇರೆ; ನಿಮ್ಮ ಸಿದ್ಧಿ ಬೇರೆ. ಎಲ್ಲರೂ ಪೂರ್ಣ. ಆದರೆ ಭಗವಂತನ ಪೂರ್ಣತೆಯ ಮುಂದೆ ಎಲ್ಲ ಪೂರ್ಣತೆಯೂ ಅಪೂರ್ಣ. ಎಲ್ಲ ಪಾತ್ರೆಯೂ ನೀರಿನಿಂದ ಪೂರ್ಣವಾಗಿದೆ. ಆದರೆ ಕಡಲಿನ ಪೂರ್ಣತೆಯ ಮುಂದೆ ಅವೆಲ್ಲವೂ ಅಪೂರ್ಣ. ಶಂಕರರ ಮೋಕ್ಷ ಒಂದು ಬಗೆಯ ವ್ಯಕ್ತಿತ್ವದ ನಾಶ. ವ್ಯಕ್ತಿತ್ವದ ಸಮೀಕರಣ ರಾಮಾನುಜರ ಮೋಕ್ಷ. ಮಧ್ವರ ಮೋಕ್ಷ ವ್ಯಕ್ತಿತ್ವದ ವಿಕಾಸ.

ಹೀಗೆ ಬದುಕಿನಿಂದ ಮೋಕ್ಷದ ತನಕ ಎಲ್ಲ ಮಜಲುಗಳಲ್ಲೂ ಹಿಂದಿನವರ ನಂಬಿಕೆಗಿಂತ ಭಿನ್ನವಾದ, ವೈಜ್ಞಾನಿಕ ಚಿಂತನೆಗೆ ತೀರ ಸಮರ್ಥನೀಯವಾದ ಹೊಸ ವಾದವನ್ನು ವೇದ ಪುರಾಣಗಳ ಆಧಾರದಿಂದಲೇ ಆಚಾರ್ಯರು ಸಮರ್ಥಿಸಿದರು. ಇದು ತತ್ವಜ್ಞಾನದ ಇತಿಹಾಸದಲ್ಲೆ ಅಭೂತ ಪೂರ್ವವಾದ ಸಂಗತಿ. ಆದರೆ ಎಷ್ಟು ಮಂದಿ ಆಚಾರ್ಯರ ಈ ಭೂಮ ವ್ಯಕ್ತಿತ್ವವನ್ನು ಅರ್ಥ ಮಾಡಿ ಕೊಂಡಿದ್ದಾರೆ ? ಎಲ್ಲರೂ ತಮ್ಮ ತಮ್ಮ ಮೂಗಿನ ನೇರಕ್ಕೆ ಆಚಾರ್ಯರನ್ನು ಎಳೆದರು. ಹೊರತು ಅವರ ಎತ್ತರವನ್ನು ಕಾಣಲು ಹೆಚ್ಚಿನವರು ಪ್ರಯತ್ನಿಸಲೇ ಇಲ್ಲ. ಹೆಚ್ಚಿನವರು ತಮ್ಮ ಕೂಪದಿಂದ ಮೇಲೆ ಬರಲು ಬಯಸದ ಕಪ್ಪೆಗಳೇ ಆದರು.

ಆಚಾರ್ಯರು ಎರಡು ಬಾರಿ ಇಡೀ ಭಾರತವನ್ನು ಸಂಚರಿಸಿದರು. ಅನೇಕ ಸುಧಾರಣೆಯನ್ನು ಮಾಡಿದರು, ಯಾಗದಲ್ಲಿ ಪ್ರಾಣಿಹಿಂಸೆ ಮಾಡುವುದನ್ನು ನಿಲ್ಲಿಸಿ ಅಹಿಂಸಾತ್ಮಕವಾದ ಯಾಗವನ್ನು ಬಳಕೆಗೆ ತಂದರು.

ಬ್ರಾಹ್ಮಣನ ದೇಹದೊಳಗೆ ಶೂದ್ರಜೀವ ಇರಬಹುದು; ಶೂದ್ರನ ದೇಹದೊಳಗೆ ಬ್ರಾಹ್ಮಣ ಜೀವ ಇರಬಹುದು. ಈ ಒಳಗಿನ 'ಜಾತಿ' ಜೀವ ಸ್ವಭಾವಕ್ಕೆ ಸಂಬಂಧಪಟ್ಟದ್ದು. ಈ ಸ್ವಭಾವದ 'ಜಾತಿಯೇ ಮುಖ್ಯ ಹೊರತು ಹುಟ್ಟಿನಿಂದ ಬರುವ ಸಾಮಾಜಿಕ ಪರಿಕಲ್ಪನೆಯ ಜಾತಿಯಲ್ಲ' ಎಂದು ಮೊದಲ ಬಾರಿ ಸಾರಿದ ಆಚಾರ್ಯರು ಮಧ್ವರು ಎನ್ನುವುದೂ ಬಹಳ ಜನಕ್ಕೆ ಗೊತ್ತಿಲ್ಲ.

ಆಚಾರ್ಯರ ಸಾಂಸ್ಕೃತಿಕ ಕ್ರಾಂತಿಯ ಕಥೆ ಇಲ್ಲಿಗೇ ಮುಗಿಯಲಿಲ್ಲ. ಆ ಕಾಲದ ಸಂಪರ್ಕ ಮಾಧ್ಯಮ ಸಂಸ್ಕೃತವಾದ್ದರಿಂದ ಅವರು ತನ್ನ ಗ್ರಂಥಗಳನ್ನು ಸಂಸ್ಕೃತದಲ್ಲೇ ಬರೆದರೂ ಜನಸಾಮಾನ್ಯರನ್ನು ಮುಟ್ಟುವುದಕ್ಕಾಗಿ ಅವರು ಎಲ್ಲ ಮುಖಗಳನ್ನು ಬಳಸಿಕೊಂಡರು.

ಸ್ವತಃ ದೊಡ್ಡ ಸಂಗೀತಗಾರರಾಗಿದ್ದ , ಅನೇಕ ಕಡೆ ಸಂಗೀತ ಕಚೇರಿಗಳನ್ನು ನಡೆಸಿದ್ದ ಆಚಾರ್ಯ ಮಧ್ವರು ಕರ್ನಾಟಕ ಸಂಗೀತದ ಪರಂಪರೆಯನ್ನು ಹುಟ್ಟುಹಾಕಿದ ಮೂಲ ಪುರುಷರಾಗಿದ್ದರು. ಅದೇ ಪರಂಪರೆ ಮುಂದೆ ನರಹರಿತೀರ್ಥರು. ಶ್ರೀಪಾದರಾಜರು, ವ್ಯಾಸತೀರ್ಥರು ಮತ್ತು ಪುರಂದರದಾಸರ ಮೂಲಕ ವ್ಯಾಪಕವಾಗಿ ಬೆಳೆಯಿತು. ಪುರಂದರದಾಸರು ಕರ್ನಾಟಕ ಸಂಗೀತದ ಪಿತಾಮಹರಾದರೆ ಆಚಾರ್ಯ ಮಧ್ವರು ಪ್ರಪಿತಾಮಹರು.

ಆಚಾರ್ಯರು ಸಂಗೀತಗಾರರಷ್ಟೇ ಅಲ್ಲ ; ವಾಗ್ಗೇಯಕಾರರೂ ಆಗಿದ್ದರು. ತಾನು ಸ್ವತಃ ಹಲವು ಹಾಡುಗಬ್ಬಗಳನ್ನು ಬರೆದರು. ತಮ್ಮ ಶಿಷ್ಯರಿಂದ ಬರೆಸಿ ಕನ್ನಡದಲ್ಲಿ ಭಕ್ತಿಪಂಥವನ್ನು ಬೆಳೆಸಿದರು. ಸ್ವತಃ

ದೊಡ್ಡ ಶಿಲ್ಪಿಯೂ ಆಗಿದ್ದ ಆಚಾರ್ಯರು ವಾಸ್ತುಶಿಲ್ಪದ ಬಗೆಗೆ, ಪ್ರತಿಮಾಶಿಲ್ಪದ ಬಗೆಗೆ ಸಂಸ್ಕೃತ ಸಾಹಿತ್ಯದ ಇತಿಹಾಸದಲ್ಲೇ ಅಪೂರ್ವವಾದ ಒಂದು ಗ್ರಂಥವನ್ನು ಬರೆದಿದ್ದಾರೆ. ಆಶ್ಚರ್ಯವೆಂದರೆ ಇವೆಲ್ಲದರ ಜತೆಗೆ ಆಚಾರ್ಯರು ಸ್ವತಃ ತನ್ನ ಶಿಷ್ಯರಿಗೆ ಅಂಗಸಾಧನೆಯನ್ನೂ ವ್ಯಾಯಾಮವನ್ನೂ ಕಲಿಸಿದ್ದರು. 'ಬಲಿಷ್ಠವಾದ ದೇಹದಲ್ಲಿ ಮಾತ್ರವೇ ಬಲಿಷ್ಠವಾದ ಬುದ್ಧಿ ಬೆಳೆಯುವುದು ಸಾಧ್ಯ. ಅಧ್ಯಯನದ ನೆಪದಿಂದ ದೇಹದಾರ್ಢ್ಯವನ್ನು ಅಲಕ್ಷಿಸಬೇಡಿ' ಎಂದು ಅವರು ತನ್ನ ಶಿಷ್ಯರಿಗೆ ಸಾರಿದರು.

ಆಚಾರ್ಯರ ಇನ್ನೊಂದು ಮಹತ್ವದ ಕೊಡುಗೆಯನ್ನು ಇಲ್ಲಿ ಸ್ಮರಿಸಬೇಕು. ಯಕ್ಷಗಾನ ಬಯಲಾಟವನ್ನು ಭಾಗವತ ಧರ್ಮದ ಪ್ರಚಾರಕ್ಕಾಗಿ ಬಳಕೆಗೆ ತಂದವರು ಆಚಾರ್ಯ ಮಧ್ವರು ಎನ್ನುವುದು ಬಹಳ ಜನಕ್ಕೆ ತಿಳಿದಿಲ್ಲ. ತನ್ನ ಶಿಷ್ಯ ನರಹರಿತೀರ್ಥರ ಮೂಲಕ ಈ ಅಪೂರ್ವ ಕಲಾಪ್ರಕಾರವನ್ನು ಹುಟ್ಟುಹಾಕಿದ ಆಚಾರ್ಯರು ಹಳ್ಳಿಯ ಅಶಿಕ್ಷಿತರಲ್ಲಿ ಧರ್ಮಪ್ರಸಾರಕ್ಕಾಗಿ ಈ ಕಲಾಮಾಧ್ಯಮವನ್ನು ಯಶಸ್ವಿಯಾಗಿ ಬಳಸಿದರು.

ಹೀಗೆ ಎಲ್ಲ ನಿಟ್ಟಿನಿಂದಲೂ ಪರಿಪೂರ್ಣವಾದ ವ್ಯಕ್ತಿತ್ವ ಆಚಾರ್ಯ ಮಧ್ವರದ್ದು. ಇದಕ್ಕೆ ಸರಿಸಾಟಿಯಾದ ಇನ್ನೊಂದು ವ್ಯಕ್ತಿತ್ವವನ್ನು ಇತಿಹಾಸ ಸೃಷ್ಟಿಸಿದ ದಾಖಲೆಯಿಲ್ಲ.

ಆಚಾರ್ಯರ ಈ ವಿದ್ವತ್ ಪರಂಪರೆಯನ್ನು ಮುಂದಿನ ಯತಿಗಳೂ ಗೃಹಸ್ಥರೂ ಬೆಳೆಸಿಕೊಂಡು ಬಂದರು. ಶ್ರೀ ಹೃಷಿಕೇಶತೀರ್ಥರು, ಶ್ರೀ ರಾಜರಾಜೇಶ್ವರತೀರ್ಥರು, ಶ್ರೀ ವಿಜಯಧ್ವಜತೀರ್ಥರು, ಶ್ರೀ ವೇದಾತ್ಮತೀರ್ಥರು, ಶ್ರೀ ವೇದಾಂಗತೀರ್ಥರು, ಶ್ರೀವಾದಿರಾಜರು, ಶ್ರೀ ರಘುವರ್ಯತೀರ್ಥರು, ಶ್ರೀ ವಿಶ್ವೇಶ್ವರತೀರ್ಥರು, ಶ್ರೀ ವಿಶ್ವಪತಿತೀರ್ಥರು ಮುಂತಾದ ಅನೇಕ ಮಂದಿ ಅಷ್ಟಮಠದ ಯತಿಗಳು ಗ್ರಂಥಗಳನ್ನು ಬರೆದು ಈ ಸಿದ್ಧಾಂತದ ಪರಂಪರೆಯನ್ನು ಶ್ರೀಮಂತಗೊಳಿಸಿದರು.

ಶ್ರೀವಾದಿರಾಜರಂತೂ ಉಡುಪಿಯನ್ನು ಸಾಂಸ್ಕೃತಿಕವಾಗಿ, ಸಾಮಾಜಿಕವಾಗಿ ಶ್ರೀಮಂತ ಗೊಳಿಸುವುದರಲ್ಲಿ ಅದ್ವಿತೀಯವಾದ ಪಾತ್ರವಹಿಸಿದರು. ಕನ್ನಡದಲ್ಲಿ ಹಾಡುಗಬ್ಬಗಳನ್ನು ಬರೆದು ಮನೆ ಮನೆಯಲ್ಲಿ ಕೀರ್ತನೆಯ ಪರಂಪರೆಯನ್ನು ಬಳಕೆಗೆ ತಂದರು.

ಆಚಾರ್ಯರ ಸಿದ್ಧಾಂತದ ಬೆಳವಣಿಗೆಗೆ ಅಪೂರ್ವವಾದ ಕಾಣಿಕೆ ನೀಡಿದ ತುಳುನಾಡಿನ ಗೃಹಸ್ಥರಲ್ಲಿ ಶ್ರೀ ತ್ರಿವಿಕ್ರಮ ಪಂಡಿತರು. ಶ್ರೀ ಶಂಕರ ಪಂಡಿತರು, ಶ್ರೀ ನಾರಾಯಣ ಪಂಡಿತರು ಮತ್ತು ಶ್ರೀ ವಾಮನ ಪಂಡಿತರು ಅಗ್ರಗಣ್ಯರು. ಆದರೆ ನಾವು ನಮ್ಮ ಇತಿಹಾಸದ ಶ್ರೀಮಂತಿಕೆಯನ್ನೆಲ್ಲ ಮರೆತು, ಮೈಮರೆತು ಸ್ವಂತಿಕೆಯಿಲ್ಲದ ಬಾಳನ್ನು ಬಾಳುವಷ್ಟು ನಾಗರಿಕರಾಗಿ ಬಿಟ್ಟಿದ್ದೇವೆ, ನಾವು ಪಶ್ಚಿಮದ ಕಡೆಗೆ ಕಣ್ಣರಳಿ ಕೂತಿದ್ದೇವೆ. ನಮಗೆ ನಮ್ಮ ಹಿತ್ತಲಲ್ಲೆ ಬಿದ್ದಿರುವ ಸಂಪತ್ತು ಕಾಣಿಸುತ್ತಲೇ ಇಲ್ಲ.

ಶ್ರೀ ವಾದಿರಾಜರ ಕಾಲದಲ್ಲಿ ಬಂಗಾಳದ ಚೈತನ್ಯ ಮಹಾಪ್ರಭುಗಳು ಉಡುಪಿಗೆ ಬಂದಿದ್ದರು. ಉಡುಪಿಯ ಕೃಷ್ಣನ ಸನ್ನಿಧಿಯಲ್ಲಿ ಆಚಾರ್ಯರು ಹಚ್ಚಿದ್ದ ನಂದಾದೀಪವನ್ನು ವೃಂದಾವನಕ್ಕೆ ಒಯ್ದು ಅಲ್ಲಿಯೂ ಅದನ್ನು ಬೆಳಗಿಸಿದರು. ಉಡುಪಿಯ ದೀಪ ಇವತ್ತಿಗೂ ವೃಂದಾವನದಲ್ಲಿ ಬೆಳಗುತ್ತಿದೆ.

ಶ್ರೀ ಚೈತನ್ಯರು ಸ್ವತಃ ಮಧ್ವರ ಸಿದ್ಧಾಂತವನ್ನು ಮೆಚ್ಚಿ ಅನುಸರಿಸಿದವರು. ಬಂಗಾಳದಲ್ಲಿ ಮಾಧ್ವ ಗೌಡೀಯ ಸಂಪ್ರದಾಯವನ್ನು ಬೆಳಗಿಸಿದವರು. ಈ ಸಂಪ್ರದಾಯದ ಯತಿಗಳೇ ಆಗಿದ್ದ ಶ್ರೀ ಭಕ್ತಿ ವೇದಾಂತ ಪ್ರಭುಪಾದರು ವಿಶ್ವದಾದ್ಯಂತ ಕೃಷ್ಣಪಂಥ (ISKCON)ವನ್ನು ಪ್ರಚುರಪಡಿಸಿದರು. ಸಾವಿರಾರು ಮಂದಿ ವಿದೇಶೀಯರು ಇಂದು ಪಂಚೆಯುಟ್ಟು, ನಾಮತೊಟ್ಟು 'ಹರೇ ಕೃಷ್ಣ' ಮಂತ್ರವನ್ನು ಜಪಿಸುತ್ತಿದ್ದಾರೆ. ಇದು ಮಾಧ್ವ ಸಂಪ್ರದಾಯದ ಕವಲೇ ಆಗಿದೆ. ಶ್ರೀ ಪ್ರಭುಪಾದರು 'ತನ್ನ ಪಂಥದ ಮೂಲಸ್ಥಾನ ಶ್ರೀಮಧ್ವರ ಉಡುಪಿ' ಎಂದು ಹೇಳುತ್ತಿದ್ದರು. ಸಾವಿರಾರು ಮಂದಿ ವಿದೇಶೀಯರನ್ನು

ಅವರು ಉಡುಪಿಗೆ ಕಳಿಸಿದ್ದರು. ಉಡುಪಿಯಲ್ಲೊಂದು ತನ್ನ ಕೃಷ್ಣ ಪಂಥದ ಕೇಂದ್ರವನ್ನು ತೆರೆಯಬೇಕೆಂಬ ಅವರ ಆಸೆ ಮಾತ್ರ ಆಸೆಯಾಗಿಯೇ ಉಳಿಯಿತು.

ಹೀಗೆ ಆಚಾರ್ಯ ಮಧ್ವರಿಂದ ಮತ್ತು ಅವರು ಸ್ಥಾಪಿಸಿದ ಕಡಗೋಲು ಕೃಷ್ಣನಿಂದ ಉಡುಪಿಯ ಹೆಸರು ಭಾರತದ ಭೂಪಟದಲ್ಲಿ ಸ್ವರ್ಣಾಕ್ಷರದಲ್ಲಿ ಕೆತ್ತಲ್ಪಟ್ಟಿತು. ಆಚಾರ್ಯ ಮಧ್ವರ ಲೋಕೋತ್ತರ ಪ್ರತಿಭೆಗೆ ಸ್ಫೂರ್ತಿ ನೀಡಿದ ನೆಲ ಉಡುಪಿ ಎನ್ನುವುದನ್ನು ನಾವು ಮರೆಯಕೂಡದು. ಉಡುಪಿಯ ಕೊಡುಗೆ ವಿಶ್ವದಲ್ಲೇ ಹಿರಿದು. ಅದನ್ನು ನಾವೇ ಮರೆತು ಕುರುಡರಾಗಿ ಬಾಳಿದರೆ ಇತಿಹಾಸ ಖಂಡಿತವಾಗಿಯೂ ನಮ್ಮನ್ನು ಕ್ಷಮಿಸದು.

(ಬನ್ನಂಜೆ ಗೋವಿಂದಾಚಾರ್ಯರ 'ಆರುಮತ್ತು' (೧೯೯೬) ಗ್ರಂಥದಿಂದ ಆಯ್ದ ಲೇಖನ - ಸಂ.)

●

೧-೩

# ಅಷ್ಟ ಮಠದ ಹೆಸರಾಂತ ಯತಿಗಳು

ಪೊಡವಿಗೊಡೆಯನ ನೆಲೆವೀಡು ಉಡುಪಿ 'ಭೂ ವೈಕುಂಠ'ವೆಂದು ಪ್ರಸಿದ್ಧವಾಗಿದೆ. ಇದು ಸಪ್ತಕ್ಷೇತ್ರಗಳಲ್ಲಿ ಒಂದಾದ ರಜತಪೀಠಪುರ ದ್ವಾರಾವತಿ ತೊರೆದು ಮಧ್ವರಿಗೊಲಿದು ರುಕ್ಮಿಣೀರಮಣ ಬಂದು ನಿಂತ ಪುಣ್ಯಭೂಮಿ. 'ಮಧ್ವ ಸರೋವರ ಸ್ನಾನ ಮುದ್ದು ಕೃಷ್ಣನ ದರ್ಶನ' ಭಾಗ್ಯವನ್ನು ಕರುಣಿಸುವ ಭಜಕರ ಬದರಿ.

ಈ ಪವಿತ್ರ ಕ್ಷೇತ್ರದಲ್ಲಿ ಇಂದಿಗೂ 'ಅಷ್ಟಮಠದ ಯತಿಗಳಿಂದ ಇಷ್ಟಪೂಜೆಯಕೊಂಬ ಕೃಷ್ಣ'ನನ್ನು ಪ್ರತಿಷ್ಠಾಪಿಸಿದವರು ಗುರುಮಧ್ವರು. ಶ್ರೀಕೃಷ್ಣನ ನಿತ್ಯಪೂಜೆಗಾಗಿ ಮಧ್ವಮತ ಪ್ರಸಾರಕ್ಕಾಗಿ ಅಷ್ಟಮಠಗಳನ್ನು ಪ್ರತಿಷ್ಠಾಪಿಸಿದರು. ಅಷ್ಟಯತಿಗಳನ್ನು ನಿಯಮಿಸಿದರು. ಆಚಾರ್ಯ ಮಧ್ವರನ್ನು ಆರಂಭಿಸಿ ಈ ಎಂಟು ನೂರು ವರ್ಷಗಳಲ್ಲಿ ಒಂದೊಂದು ಮಠದ ಪರಂಪರೆಯಲ್ಲೂ ಮೂವತ್ತಕ್ಕೂ ಮಿಕ್ಕಿ ಯತಿಗಳು ಬಾಳಿ ಉಡುಪಿಯನ್ನು ಬೆಳಗಿಸಿದ್ದಾರೆ. ಕೆಲವರು ಪ್ರಸಿದ್ಧರಾಗಿದ್ದಾರೆ. ಕೆಲವರ ಪ್ರಸಿದ್ಧಿ ಕಾಲಗರ್ಭದಲ್ಲಿ ಅಡಗಿ ಹೋಗಿದೆ. ಅವರ ಪ್ರಸಿದ್ಧಿಯನ್ನು ಪ್ರಚುರಪಡಿಸುವ ಸಾರ್ಥಕ ಪ್ರಯತ್ನವಿನ್ನೂ ನಡೆಯಬೇಕಾಗಿದೆ.

## ಶ್ರೀ ಪಲಿಮಾರು ಮಠ

### ಶ್ರೀ ಹೃಷಿಕೇಶತೀರ್ಥರು (೧೩ನೆಯ ಶತಮಾನ)

ಶ್ರೀಮಧ್ವಾಚಾರ್ಯರಿಂದ ಆಶ್ರಮವನ್ನು ಸ್ವೀಕರಿಸಿದ ಬಾಲಸನ್ಯಾಸಿಗಳಾದ ಹೃಷಿಕೇಶತೀರ್ಥರು ಪಲಿಮಾರು ಮಠದ ಮೂಲಯತಿಗಳು. ಇವರು ಶ್ರೀಮಧ್ವಾಚಾರ್ಯರ ಪರಮಾಪ್ತ ಸಾಕ್ಷಾಚ್ಛಿಷ್ಯರು. ಆಚಾರ್ಯರು ಪೂಜಿಸಿ ಕರುಣಿಸಿದ ಸೀತಾಲಕ್ಷ್ಮಣ ಸಮೇತ ಶ್ರೀರಾಮದೇವರು ಇವರ ಹಾಗೂ ಈ ಮಠದ ಉಪಾಸ್ಯ ಮೂರುತಿ. ಆಚಾರ್ಯರು ರಚಿಸಿದ ಗ್ರಂಥಗಳನ್ನು ಇವರೇ ಸ್ವತಃ ತುಳುಭಾಷೆಯಲ್ಲಿ ಬರೆದ 'ಸರ್ವಮೂಲ'ವೆಂದು ಪ್ರಸಿದ್ಧವಾದ ಈ ಗ್ರಂಥ ಇಂದಿಗೂ ಪಲಿಮಾರು ಮಠದಲ್ಲಿದೆ. ಹೀಗೆ ಆಚಾರ್ಯರ ಕೃತಿಗಳ ಲೇಖಕ ಮಾತ್ರವಲ್ಲ, ಉಪನ್ಯಾಸಕರೂ ಆಗಿ ಅವರ ಪರಮಪ್ರೀತಿಗೆ ಪಾತ್ರರಾದ ಆಪ್ತ ಕಾರ್ಯದರ್ಶಿ ಇವರಾಗಿದ್ದರು. ಶ್ರೀಮಧ್ವಾಚಾರ್ಯರ ತತ್ತ್ವ ಹಾಗೂ ಚರಿತ್ರೆಗಳನ್ನೊಳಗೊಂಡ

'ಸಂಪ್ರದಾಯ ಪದ್ಧತಿ' ಎಂಬ ಗ್ರಂಥವನ್ನೂ ರಚಿಸಿದ್ದಾರೆ. ಇವರಿಗೆ 'ಅಷ್ಟೋತ್ಕೃಷ್ಟ' ಎಂಬ ಬಿರುದು ಇದ್ದುದೂ ಇಂದಿಗೂ ಈ ಮಠದ ಯತಿಗಳಿಗೆ ಅನ್ವಯವಾಗುತ್ತಿದೆ. ಶ್ರೀಸಮಾತ್ಮೇಶತೀರ್ಥರಿಗೆ ಆಶ್ರಮ ಕೊಟ್ಟು ಪ್ರಯಾಗದಲ್ಲಿ ಗಂಗಾಪ್ರವೇಶ ಮಾಡಿ ವಿಷ್ಣು ಸನ್ನಿಧಿಯನ್ನು ಸೇರಿದ ಪುಣ್ಯಜೀವಿಗಳು.

ಹೀಗೆ ಪರಕ್ಷೇತ್ರದಲ್ಲಿ ತಮ್ಮ ದೇಹತ್ಯಾಗ ಮಾಡುವ ಪರಂಪರೆಗೆ ಇವರು ಈ ರೀತಿ ಓನಾಮ ಹಾಕಿದ ಮೇಲೆ ಈ ಮಠದ ಯತಿಗಳೇ ಆದ ಸಮಾತ್ಮೇಶತೀರ್ಥರು ಕೃಷ್ಣಾತೀರದಲ್ಲಿಯೂ, ಸಂಭವತೀರ್ಥರು ಅಯೋಧ್ಯೆಯಲ್ಲಿಯೂ, ಅಪರಾಜಿತೀರ್ಥರು ಗೋದಾವರಿ ತೀರದಲ್ಲೂ, ವಿದ್ಯಾಮೂರ್ತಿತೀರ್ಥರು ಮಳಖೇಡದಲ್ಲಿಯೂ, ಶ್ರೀನಿಧಿತೀರ್ಥರು ಜಗನ್ನಾಥ ಕ್ಷೇತ್ರದಲ್ಲೂ, ವಿದ್ಯೇಶತೀರ್ಥರು ರಾಮೇಶ್ವರದಲ್ಲೂ, ಜಗದ್ಭೂಷಣತೀರ್ಥರು ತಿರುಪತಿಯಲ್ಲಿಯೂ, ರಾಮಚಂದ್ರತೀರ್ಥರು ಭೀಮರಥೀ ತೀರದಲ್ಲೂ , ರಾಘವೇಂದ್ರ ತೀರ್ಥರು ಶ್ರೀರಂಗದಲ್ಲೂ, ವಿದ್ಯಾಪತಿತೀರ್ಥರು ಕಾಶಿ ಕ್ಷೇತ್ರದಲ್ಲೂ, ರಘುಪತಿತೀರ್ಥರು ಹರಿದ್ವಾರದಲ್ಲೂ, ರಘುನಾಥ ತೀರ್ಥರು ದ್ವಾರಕೆಯಲ್ಲೂ ಪ್ರಾಣತ್ಯಾಗ ಮಾಡಿ ವಿಷ್ಣುಪಾದವನ್ನು ಸೇರಿದ್ದಾರೆ.

## ಶ್ರೀ ರಾಜರಾಜೇಶ್ವರತೀರ್ಥರು (೧೪ನೆಯ ಶತಮಾನ)

ಶ್ರೀ ವಿದ್ಯಾಮೂರ್ತಿತೀರ್ಥರಿಂದ ಆಶ್ರಮ ಪಡೆದ ಇವರು ಪಲಿಮಾರು ಮಠದ ಪರಂಪರೆಯಲ್ಲಿ ಆರನೆಯವರು. 'ಶ್ರೀರಾಮ ಸಂದೇಶ' ಎಂಬ ಖಂಡಕಾವ್ಯವನ್ನು ರಚಿಸಿದ ಇವರು ವೇದಾಂತ, ವ್ಯಾಕರಣ ಸಾಹಿತ್ಯಗಳಲ್ಲಿ ಅದ್ವಿತೀಯ ಪಂಡಿತರು. ಇವರು ರಚಿಸಿದ 'ಮಂಗಲಾಷ್ಟಕ'ವು ಜನಪ್ರಿಯ ಪ್ರಾತಃಸ್ತೋತ್ರವಾಗಿದೆ. ಗುರುಗಳು ಜೀವಿಸಿರುವಾಗಲೇ ಚಿಕ್ಕಪಟ್ಟದವರಾಗಿಯೇ ಇವರು ಅಕಾಲದಲ್ಲಿ ಕಾಲವಶರಾದರು.

## ಶ್ರೀ ರಘುವರ್ಯತೀರ್ಥರು (೧೮ನೆಯ ಶತಮಾನ)

ಹದಿನಾರು ಸಲ ಸುಧಾಮಂಗಳವನ್ನು ಮಾಡಿದ ಘನವಿದ್ವಾಂಸರಾದ ಶ್ರೀರಾಮಭದ್ರ ತೀರ್ಥರಿಂದ ಆಶ್ರಮ ಪಡೆದ ಇವರು ವಿದ್ವದ್ವರೇಣ್ಯರು, ಘನ ಪಂಡಿತರು, ಶಾಸ್ತ್ರವೇತ್ತರು ಕೂಡ. ಹದಿನಾರನೆಯ ಹರೆಯದಲ್ಲೇ ತಂತ್ರಚತುಷ್ಟಯ ಪಂಡಿತರಾದ ಇವರು ಉದ್ದಾಮ ಪಂಡಿತರೂ ಮಹಾ ತಪಸ್ವಿಗಳೂ ಆಗಿದ್ದರು. ತಮ್ಮ ಇಪ್ಪತ್ತನೆಯ ವಯಸ್ಸಿನಲ್ಲೇ 'ರಘುನಾಥವಿಜಯ' ಎಂಬ ಉತ್ತಮ ಕಾವ್ಯವನ್ನು ರಚಿಸಿದ ಇವರು 'ಲಘುಪರಿಭಾಷಾ' ಎಂಬ ಗ್ರಂಥವನ್ನು ರಚಿಸಿದ್ದಾರೆ. 'ಅಣುಮಧ್ವವಿಜಯ'ಕ್ಕೆ ಸುಂದರವಾದ ವ್ಯಾಖ್ಯಾನವನ್ನು ಬರೆದಿದ್ದಾರೆ. ತೀರ್ಥಕ್ಷೇತ್ರಗಳನ್ನು ಸಂದರ್ಶಿಸುತ್ತಾ ಅನೇಕ ಕೀರ್ತನೆಗಳನ್ನು ರಚಿಸಿದ ಇವರು ಕಾಶಿಯ ವಿದ್ಯಾಮಂಟಪದಲ್ಲಿ ವಾದಿಗಳನ್ನು ಜಯಿಸಿದ್ದಾರೆ. ಇವರ ವೃಂದಾವನವು ಪಲಿಮಾರಿನಲ್ಲಿ ರಾರಾಜವಾಗಿದೆ.

## ಶ್ರೀ ರಘುಪ್ರವೀರತೀರ್ಥರು (೧೮ನೆಯ ಶತಮಾನ)

ಶ್ರೀ ರಘುವರತೀರ್ಥರಿಂದ ಆಶ್ರಮ ಸ್ವೀಕರಿಸಿದ ಇವರು ಪಲಿಮಾರು ಮಠದ ಪರಂಪರೆಯಲ್ಲಿ ೨೪ನೆಯವರು, ಮಹಾತಪಸ್ವಿಗಳು. ಶ್ರೀನಿವಾಸ ಮುಖ್ಯಪ್ರಾಣರ ಕೃಪೆಯಿಂದ ನಾಲ್ಕು ವರ್ಷಗಳಲ್ಲಿಯೇ ಅದ್ವಿತೀಯ ವಿದ್ವಾಂಸರಾದರು, ಹನ್ನೆರಡು ಸಲ ಸುಧಾಮಂಗಳವನ್ನು ಮಾಡಿ ಶಿಷ್ಯರನೇಕರನ್ನು ಅನುಗ್ರಹಿಸಿದ್ದಾರೆ. ರಾಜರುಗಳಿಂದ ಜಯಪತ್ರ, ಛತ್ರ, ಚಾಮರಾದಿಗಳನ್ನೂ ಪಡೆದಿದ್ದಾರೆ. ಇವರು ಹನುಮದ್ಭೀಮ, ಮಧ್ವಾಷ್ಟೋತ್ತರ ಸ್ತೋತ್ರ ಮೊದಲಾದ ಕೃತಿಗಳನ್ನೂ ರಚಿಸಿದ್ದಾರೆ. ಇವರು ಪರಮ

ಸಾತ್ವಿಕರು, ತಪಸ್ವಿಗಳು, ಆದರೂ ಹಠಯೋಗಿಗಳು. ಇವರ ಪರ್ಯಾಯ ಕಾಲದಲ್ಲಿ ಶ್ರೀಕೃಷ್ಣನ ಅಭಿಷೇಕಕ್ಕೆ ಹಾಲನ್ನು ಕೊಡುತ್ತಿದ್ದ 'ನರ್ಮದೆ'ಯೆಂಬ ಹಸುವನ್ನು ಹುಲಿಯೊಂದು ಕೊಂದು ತಿನ್ನಲು ಶ್ರೀಕೃಷ್ಣನ ಅಭಿಷೇಕಕ್ಕೆ ಹಾಲಿಲ್ಲವೆಂದು ದುಃಖಿಸುತ್ತಾ ಪಂಚಾಮೃತ ಪೂಜೆಗಳನ್ನು ಮಾಡದೆ ದೇವರ ಮುಂದೆ ಹಠದಿಂದ ಧ್ಯಾನಮಗ್ನರಾಗಲು ಸಂಜೆಯೊಳಗೆ ಆ ಹುಲಿ ಶ್ರೀಕೃಷ್ಣನ ಸಮ್ಮುಖದಲ್ಲೇ ರಕ್ತಕಾರಿ ಪ್ರಾಣಬಿಟ್ಟಿತು. ಅಂದಿನಿಂದ ಇವರನ್ನು 'ಪಿಲಿಕೆರ್ತಿಸ್ವಾಮ್ಯು' (ಹುಲಿಕೊಂದ ಸ್ವಾಮಿಗಳು) ಎಂದು ಕರೆದದ್ದಲ್ಲದೆ ಇವರ ಸ್ಮಾರಕವಾಗಿ ಉಡುಪಿಯಲ್ಲಿರುವ ಇವರ ವೃಂದಾವನದ ಬಳಿ ರಚಿಸಿದ ಶಿಲಾಮಯ ವ್ಯಾಘ್ರಮುಖವನ್ನು ಇಂದಿಗೂ ಕಾಣಬಹುದು.

## ಶ್ರೀ ರಘುಮಾನ್ಯತೀರ್ಥರು (೨೦ನೆಯ ಶತಮಾನ)

ಪಲಿಮಾರು ಮಠದ ಪರಂಪರೆಯಲ್ಲಿ ೨೮ನೆಯವರಾದ ಇವರು ಅದಮಾರು ಮಠದ ಶ್ರೀ ವಿಬುಧಪ್ರಿಯ ತೀರ್ಥರಿಂದ ಆಶ್ರಮ ಹಾಗೂ ವಿದ್ಯೆಯನ್ನು ಪಡೆದವರು, ಕಲಾಭಿಮಾನಿಗಳು. ಜೀರ್ಣಶೀರ್ಣವಾದ ಮಠವನ್ನು ಸುಂದರವಾಗಿ ಕಟ್ಟಿಸಿದರು. ಶ್ರೀರಾಮ ದೇವರಿಗೆ ೭೦೦ ಪವನುಗಳ ಸುವರ್ಣ ಪೀಠವನ್ನು ಮಾಡಿಸಿದ ಇವರು ಶ್ರೀಕೃಷ್ಣ ದೇಗುಲಕ್ಕೆ ವಿದ್ಯುದ್ದೀಪಗಳ ವ್ಯವಸ್ಥೆಯನ್ನು ಮಾಡಿಸಿದರು. ಮೈಸೂರಿನ ಮಹಾರಾಜರು, ಮೈಸೂರಿನ ದಿವಾನರಾದ ಇಸ್ಮಾಯಿಲ್‌ರು ಎಡನೀರು ಮಠದ ಶ್ರೀ ಈಶ್ವರಾನಂದ ಭಾರತಿ ಸ್ವಾಮಿಗಳವರೂ ಕಾಶೀಮಠದ ಶ್ರೀ ಸುಕೃತೀಂದ್ರತೀರ್ಥರೂ, ಗೋಕರ್ಣ ಮಠದ ಶ್ರೀ ಕಮಲಾಕಾಂತತೀರ್ಥರೂ ಹಾಗೂ ಶ್ರೀ ಇಂದಿರಾಕಾಂತ ತೀರ್ಥರೂ ಇತರ ಅನೇಕ ರಾಜರಾಣಿಯವರೂ ನ್ಯಾಯಾಧೀಶರೂ ಮಂತ್ರಿಗಳೂ ಇವರ ಪರ್ಯಾಯ ಕಾಲದಲ್ಲಿ ಶ್ರೀಕೃಷ್ಣನ ದರುಶನಕ್ಕೆ ಆಗಮಿಸಿದ್ದನ್ನು ಕಂಡಾಗ ಇವರ ಲೌಕಿಕ ವ್ಯವಹಾರ ಕೌಶಲವನ್ನು ತಿಳಿಯಬಹುದು. ಇಂದಿಗೂ ಸುವ್ಯವಸ್ಥಿತವಾಗಿ ನಡೆಯುತ್ತಿರುವ ಉಡುಪಿ ಸಂಸ್ಕೃತ ಮಹಾಪಾಠಶಾಲೆಯ ರೂವಾರಿಗಳು ಇವರು. ಕುಗ್ರಾಮ ಪಲಿಮಾರನ್ನು ಮಾದರಿ ಗ್ರಾಮವನ್ನಾಗಿಸಿದ ಕೀರ್ತಿಯೂ ಇವರಿಗೆ ಸಲ್ಲುತ್ತದೆ.

## ಶ್ರೀ ವಿದ್ಯಾಮಾನ್ಯತೀರ್ಥರು

ಭಗವತ್ಪ್ರೇರಣೆಯೋ ಎಂಬಂತೆ ಭಂಡಾರಕೇರಿ ಶ್ರೀಗಳವರಾದ ಇವರು ಪಲಿಮಾರು ಮಠದ ಶ್ರೀಗಳವರಾಗಿ ಶ್ರೀಕೃಷ್ಣನ ಪೂಜೆಯನ್ನು ಮಾಡಿ ಇತಿಹಾಸ ನಿರ್ಮಾಣ ಮಾಡಿದ ಯತಿವರೇಣ್ಯರು. ಶ್ರೀವಿಶ್ವೇಶತೀರ್ಥರಂತಹ ಅನರ್ಘ್ಯ ರತ್ನವನ್ನು ಸಮಾಜಕ್ಕೆ ಉಡುಗೊರೆಯಾಗಿ ಕೊಟ್ಟ ಇವರು ಉದ್ದಾಮ ಪಂಡಿತರು, ತಪಸ್ವಿಗಳು, ವಿದ್ವಜ್ಜನಪ್ರಿಯರು, ವಿದ್ವಜ್ಜನಪೂಜ್ಯರೂ ಆಗಿದ್ದಾರೆ. ಸದಾ ಪಾಠಪ್ರವಚನವೇ ಜೀವನದ ಉಸಿರಾಗಿರುವ, ಮಾಧ್ವತತ್ತ್ವಜ್ಞಾನ ಪ್ರಸಾರಕ್ಕಾಗಿ ಜೀವನವನ್ನು ಮುಡಿಪಾಗಿಟ್ಟಿರುವ ಸತ್ಯಧ್ಯಾನತೀರ್ಥರ ಅಚ್ಚುಮೆಚ್ಚಿನ ಶಿಷ್ಯರಾದ ಇವರ ಶಿಷ್ಯಸಂದೋಹ ಬೆಳೆಯುತ್ತಲೇ ಇದೆ. 'ಮಾಧ್ವರಾದ್ಧಾಂತ ಸಂವರ್ಧಿನೀಸಭಾ'ವನ್ನು ನಡೆಸಿ ಮಾಧ್ವತತ್ತ್ವಜ್ಞಾನವನ್ನು ಪ್ರಸಾರ ಮಾಡುತ್ತಿದ್ದಾರೆ. ಆದರ್ಶ ಗುರುಕುಲವನ್ನು ಕಟ್ಟಿ ಅದಮಾರಿನಲ್ಲಿ ಬೆಳೆಸುತ್ತಿರುವ ಇವರು ಉಡುಪಿಯ ಮುಂದಿನ ದೇದೀಪ್ಯಮಾನ ಜ್ಯೋತಿಗಳಾದ ಪುತ್ತಿಗೆ ಶ್ರೀಗಳವರಿಗೆ ಅದಮಾರು ಮಠ, ಪಲಿಮಾರು ಮಠ ಹಾಗೂ ಭಂಡಾರಕೇರಿ ಮಠದ ಕಿರಿಯ ಶ್ರೀಗಳವರಿಗೆ ಪಾಠ ಪ್ರವಚನಗಳನ್ನು ಮಾಡುತ್ತಾ ತಮ್ಮ ಗರಡಿಯಲ್ಲಿ ಪಳಗಿಸಿ ಬೆಳಗಿಸುತ್ತಿದ್ದಾರೆ. ಬದರಿಯಲ್ಲಿ ಮಧ್ವಾಚಾರ್ಯರ ನಂತರ ೪೮ ದಿನ ಕಠಿಣ ಕಾಮೌನ ವ್ರತವನ್ನಾಚರಿಸಿದ ಮಹಾತಪಸ್ವಿಗಳಾದ ಮುಗ್ಧಸ್ನಿಗ್ಧ ಸರಳ ವ್ಯಕ್ತಿತ್ವದ ಈ ಯೋಗಿವರೇಣ್ಯರು ಇಂದಿಗೂ ಮಾಧ್ವ ಜನತೆಯ ಬೆಲೆಕಟ್ಟಲಾಗದ ಸೊತ್ತು.

# ಶ್ರೀ ಅದಮಾರು ಮಠ

ಶ್ರೀಮಧ್ವಾಚಾರ್ಯಕರಾರ್ಚಿತ ಶ್ರೀ ಚತುರ್ಭುಜ ಕಾಳಿಂಗಮರ್ದನ ಕೃಷ್ಣನ ಭಜಕರ ಈ ಮಠದ ಪರಂಪರೆಯ ಮೂಲಯತಿಗಳು ಶ್ರೀ ನೃಸಿಂಹತೀರ್ಥರು. ಈ ಪರಂಪರೆಯಲ್ಲಿ ಬಹು ಪ್ರಸಿದ್ಧರು ಶ್ರೀ ವಿಬುಧಪ್ರಿಯತೀರ್ಥರು. ಈ ಯತಿಗಳೀರ್ವರ ಮಧ್ಯಕಾಲದಲ್ಲಿ ಪರಿವ್ರಾಜಕರನೇಕರು ಪ್ರಸಿದ್ಧರಿದ್ದಿರಬಹುದು. ಅವರ ಚರಿತ್ರೆಯನ್ನು ತಿಳಿಸುವ ದಿಶೆಯಲ್ಲಿ ಪ್ರಯತ್ನ ನಡೆಯಬೇಕಾಗಿದೆ.

## ಶ್ರೀ ವಿಬುಧಪ್ರಿಯತೀರ್ಥರು (೨೦ನೆಯ ಶತಮಾನ)

ಉಡುಪಿಯ ಮಾಧ್ವಯತಿಗಳ ಪರಂಪರೆಯಲ್ಲಿ ಶ್ರೀವಾದಿರಾಜರ ಅನಂತರ ಬಹು ಪ್ರಸಿದ್ಧರಾದವರು ಶ್ರೀ ವಿಬುಧಪ್ರಿಯರು. ಸುಂದರ ಶರೀರದಿಂದ, ಅತಿಶಯ ತೇಜಸ್ಸಿನಿಂದ, ಶ್ರೀಮದ್ಗಾಂಭೀರ್ಯದಿಂದ, ಮೃದುಮಧುರ ಸಂಭಾಷಣೆಗಳಿಂದ, ಅಸಾಧಾರಣ ಪಾಂಡಿತ್ಯದಿಂದ ವಿಬುಧರಿಗೆ ಮಾತ್ರ ಪ್ರಿಯರಾಗಿರಲಿಲ್ಲ, ಸರ್ವಜನಪ್ರಿಯರಾಗಿದ್ದರು. ಇವರ ವ್ಯಕ್ತಿತ್ವದಲ್ಲೇ ಅತಿಶಯ ಆಕರ್ಷಣೆಯಿತ್ತು. ಇವರು ಬಹುಕಾಲ ಮಕ್ಕಳಿಲ್ಲದ ರಂಗಪ್ಪಾಚಾರ್ಯ ದಂಪತಿಗಳಿಗೆ ಶ್ರೀಕೃಷ್ಣಪ್ರೇರಿತ ಶ್ರೀ ವಿಬುಧಾಧಿರಾಜತೀರ್ಥರ ಅನುಗ್ರಹದಿಂದ ಹುಟ್ಟಿದವರು. ಅಪ್ರತಿಮ ಪಂಡಿತರಾದ ಸೋದೆ ಮಠದ ಶ್ರೀ ವಿಶ್ವಾಧೀಶತೀರ್ಥರ ಶಿಷ್ಯರು. ಸಮರ್ಥ ಗುರುವಿಗೆ ಯೋಗ್ಯ ಶಿಷ್ಯರಾಗಿ ಸಲಕಶಾಸ್ತ್ರ ಪಾರಂಗತರಾದರು. ಪೌರೋಹಿತ್ಯವನ್ನು ಬಲ್ಲವರಾಗಿದ್ದರು. ಆಯುರ್ವೇದಾಭಿಜ್ಞರಾದ ಇವರು ಹಸಿತರಕಾರಿಗಳನ್ನೇ ತಿಂದು ಜೀವಿಸಿದ್ದುಂಟು. ಒಂದೊಂದು ಪರ್ಯಾಯವೂ ಉಡುಪಿಯ ಜನತೆ ನೆನೆಯುವಂತೆ ಬಹು ವೈಭವದಿಂದ ಮೂರು ಪರ್ಯಾಯಗಳನ್ನು ನೆರವೇರಿಸಿದ್ದರು. ಇವರ ಕಾಲದ ಇನ್ನೊಬ್ಬ ದಿಗ್ದಂತಿಪಂಡಿತರು ಉತ್ತರಾದಿ ಮಠದ ಶ್ರೀ ಸತ್ಯಧ್ಯಾನತೀರ್ಥರು. ಯತಿವರೇಣ್ಯರಿಬ್ಬರ ಪರಸ್ಪರ ಭೇಟಿಯಾಗುವ ಆಂತರ್ಯ ಶ್ರೀಕೃಷ್ಣನ ಅನುಗ್ರಹದಿಂದ ಫಲಿಸಿತು, ಉಡುಪಿಯಲ್ಲೇ ಇವರೀರ್ವರ ಅವಿಸ್ಮರಣೀಯ ಭೇಟಿಯಾಗಿತ್ತು. ಇವರ ಮಠವೊಂದು ವಿದ್ಯಾಪೀಠವಾಗಿತ್ತು. ವಿದ್ವಾಂಸರ ಶಾಸ್ತ್ರಾರ್ಥಮಂಥನದ ಗರಡಿಮನೆಯಾಗಿತ್ತು. ಪೇಜಾವರ ಮಠದ ವಿಶ್ವಮಾನ್ಯತೀರ್ಥರು, ಪಲಿಮಾರು ಮಠದ ರಘುಮಾನ್ಯತೀರ್ಥರು, ಕಾಣಿಯೂರು ಮಠದ ವಿದ್ಯಾಸಮುದ್ರತೀರ್ಥರು, ಪುತ್ತಿಗೆ ಮಠದ ಸುಜ್ಞಾನೇಂದ್ರತೀರ್ಥರು ಇವರ ಶಿಷ್ಯರು. ಲೋಕಮಾನ್ಯ ವಿದ್ವಾಂಸರಾದ ಶ್ರೀವಿದ್ಯಾಮಾನ್ಯತೀರ್ಥರಿಗೆ ಸನ್ಯಾಸಾಶ್ರಮವಿತ್ತು ಭಂಡಾರಕೇರಿ ಮಠಾಧಿಪತಿಗಳನ್ನಾಗಿ ಮಾಡಿದ ವಿಬುಧಪ್ರಿಯರು ತನ್ನ ಅನಂತರದ ಅದ್ವಿತೀಯ ಪಂಡಿತರ ಉದಯಕ್ಕೆ ಕಾರಣಕರ್ತರಾದರು. ಉಡುಪಿಯ ಸಂಸ್ಕೃತ ಕಾಲೇಜಿಗೆ ಇವರದೇ ಪ್ರೇರಣೆ. ಈಗಿನ ಚೌಕಿಯೂ ಇವರದೇ ರಚನೆ. ವಟುರೂಪಿ ಮುಖ್ಯಪ್ರಾಣನ ಪ್ರೇರಣೆಯಂತೆ ಘಟಿಕಾಚಲದಲ್ಲಿ ನೆಲೆಸಿ ಶ್ರೀನೃಸಿಂಹ ದೇವರ ಸೇವೆ ಮಾಡಿ ಶಾಶ್ವತೋತ್ಸವ ನಡೆಯಲು ಉತ್ತಮರಥವನ್ನು ಕಟ್ಟಿಸಿ ಸಮರ್ಪಿಸಿದರು. ಉಡುಪಿಯ ಗೌರವಪತಾಕೆಯನ್ನು ಬಹು ಎತ್ತರಕ್ಕೆ ಏರಿಸಿದ ಈ ಯತಿಶ್ರೇಷ್ಠರು ಘಟಿಕಾಚಲದಲ್ಲಿ ವೃಂದಾವನಸ್ಥರಾದರು.

## ಶ್ರೀ ವಿಬುಧೇಶತೀರ್ಥರು

ಶ್ರೀ ಮಠದ ಪರಂಪರೆಯಲ್ಲಿ ೩೧ನೆಯವರಾದ ಶ್ರೀ ವಿಬುಧೇಶತೀರ್ಥರು ಈಗಿನ ಪೀಠಾಧಿಪತಿಗಳು. ಹೆಸರಿಗೆ ತಕ್ಕಂತೆ ವಿಬುಧರು ಈಶರು. ಪಂಡಿತರ ಪಂಡಿತ. ಪಡುಮನ್ನೂರು ನಾರಾಯಣಾಚಾರ್ಯರಲ್ಲಿ ಅಭ್ಯಸಿಸಿದ ಶ್ರೀಗಳವರು, ತರ್ಕವೇದಾಂತಗಳ ಬಲ್ಲಿದರು.

ಆಂಗ್ಲಭಾಷೆಯಲ್ಲೂ ನಿರರ್ಗಳವಾಗಿ ಮಾತನಾಡಬಲ್ಲರು. ಇವರ ವಿದ್ಯಾಪಕ್ಷಪಾತಿತ್ವ ಎಣೆ ಇಲ್ಲದ್ದು. ಉಡುಪಿಯ ಜನತೆ ಮೆಚ್ಚುವ ಪೂರ್ಣಪ್ರಜ್ಞ ಕಾಲೇಜನ್ನು ಕಟ್ಟಿ ತನ್ನ ಕಾಲಲ್ಲೇ ನಿಲ್ಲುವ ಶಕ್ತಿಯನ್ನು ತುಂಬಿಸಿದ ಶಕ್ತರು. ಹತ್ತಾರು ವಿದ್ಯಾಸಂಸ್ಥೆಗಳನ್ನು ಕಟ್ಟಿದ ವಿದ್ಯಾಶಿಲ್ಪಿಗಳು. ಖಂಡಿತವಾದಿಗಳಾದರೂ ಮೃದುಭಾಷಿಗಳು. ಬೆಂಗಳೂರಿನ ಇವರ ಪೂರ್ಣಪ್ರಜ್ಞ ಶಾಲೆ ವಿದ್ಯಾಕ್ಷೇತ್ರಕ್ಕೇ ಕಳಶಪ್ರಾಯವಾಗಿದೆ. ಇಂದಿನ ಕಲುಷಿತ ವಿದ್ಯಾಕ್ಷೇತ್ರದಲ್ಲೇ ಮಾದರಿ ಶಾಲೆಯಾಗಿದೆ. ಎರಡು ಪರ್ಯಾಯಗಳನ್ನು ಯಶಸ್ವಿ-ಯಾಗಿ ನಿರ್ವಹಿಸಿದ ಇವರು ರಜತ ಪೀಠದ ದೊರೆಗೆ ರಜತ ರಥವನ್ನು ನಿರ್ಮಿಸಿ ಸಮರ್ಪಿಸಿದರು. ಏಕಾಂತ ಸೇವೆಗಾಗಿ ಚಿನ್ನದ ತೊಟ್ಟಿಲನ್ನೂ ಸಮರ್ಪಿಸಿದರು. ಬಹು ಯತಿಗಳ ಬಹುವಿಧ ಯತ್ನದ ಸಂಸ್ಕೃತ ಕಾಲೇಜಿನ ಸ್ವಂತ ಕಟ್ಟಡವನ್ನು ಸಂಪೂರ್ಣಗೊಳಿಸಿದ ಸಂಸ್ಕೃತಾಭಿಮಾನಿಗಳು, ಗುರುಪ್ರೇಮಿಗಳು. ಪ್ರಾಣಿದಯೆ, ವಿದ್ಯಾಪ್ರೇಮ, ವಿದ್ಯಾರ್ಥಿ ವಾತ್ಸಲ್ಯಗಳ ಜೊತೆಗೆ ಹಿಡಿದ ಕೆಲಸವನ್ನು ಪೂರೈಸುವ ಛಲವೂ ಇದೆ.

# ಶ್ರೀ ಕೃಷ್ಣಾಪುರ ಮಠ

## ಶ್ರೀ ವಿದ್ಯಾಸಮುದ್ರತೀರ್ಥರು (೧೮ನೆಯ ಶತಮಾನ)

ಶ್ರೀಮಧ್ವಾಚಾರ್ಯರ ಎಂಟು ಮಂದಿ ಶಿಷ್ಯರಲ್ಲಿ ಒಬ್ಬರು ಜನಾರ್ದನತೀರ್ಥರು. ಶ್ರೀ ಕೃಷ್ಣಾಪುರ ಮಠಾಧೀಶರು ದ್ವಿಭುಜ ಕಾಳಿಂಗಮರ್ದನ ಕೃಷ್ಣನ ಆರಾಧಕರು. ಈ ಮಠದ ಗುರುಪರಂಪರೆಯಲ್ಲಿ ಪ್ರಸಿದ್ಧರಾದವರು ೨೯ನೆಯವರಾದ ಶ್ರೀ ವಿದ್ಯಾಸಮುದ್ರತೀರ್ಥರು. ಶ್ರೀಕೃಷ್ಣನಿಗೆ ಬ್ರಹ್ಮರಥ ಕಟ್ಟಿಸಿ ಬ್ರಹ್ಮರಥೋತ್ಸವ ಸೇವೆ ನಿರಂತರವಾಗಿ ನಡೆಯುವಂತೆ ಮಾಡಿದರು. ಅನಾರೋಗ್ಯ ಪೀಡಿತರಾಗಿ ವಿದ್ಯಾಧಿಪತಿತೀರ್ಥರಿಗೆ ಆಶ್ರಮವನ್ನಿತ್ತರು. ಸರ್ವಶಾಸ್ತ್ರಪಾರಂಗತರಾದ ಈ ಯತಿಗಳು ಉಡುಪಿಯ ಪಾಡಿಗಾರಿದಲ್ಲಿ ಮಠ ಕಟ್ಟಿ ಅಧ್ಯಯನ ಅಧ್ಯಾಪನ ಮಾಡುತ್ತಿದ್ದಾಗಲೇ ಅಕಾಲದಲ್ಲಿ ಹರಿಚರಣವನ್ನು ಸೇರಲು ದುಃಖಿತ ಶ್ರೀ ವಿದ್ಯಾಸಮುದ್ರತೀರ್ಥರು ಯಾರಿಗೂ ಆಶ್ರಮವನ್ನೀಯದೆ ಹರಿಪಾದವನ್ನೈದರು.

## ಶ್ರೀ ವಿದ್ಯಾಧೀಶರು (೧೯ನೆಯ ಶತಮಾನ)

ಶ್ರೀ ವಿದ್ಯಾಸಮುದ್ರತೀರ್ಥರು ಶಿಷ್ಯ ಸ್ವೀಕಾರ ಮಾಡದೆ ಇಹಲೋಕ ತ್ಯಜಿಸಲು ದ್ವಂದ್ವಮಠಾಧಿಪತಿಗಳಾದ ಶ್ರೀ ಭುವನೇಂದ್ರತೀರ್ಥರು ತಮ್ಮಲ್ಲಿ ಸುಮಧ್ವವಿಜಯ ಅಭ್ಯಾಸ ಮಾಡುತ್ತಿದ್ದ ವಟುವಿಗೆ ಆಶ್ರಮವಿತ್ತರು, ಇವರೇ ಶ್ರೀ ವಿದ್ಯಾಧೀಶತೀರ್ಥರೆಂದು ಪ್ರಖ್ಯಾತ ರಾದವರು. ಕಾಶಿಯ ವಿದ್ಯಾಪೀಠದಲ್ಲಿ ಹನ್ನೆರಡು ವರ್ಷ ಅಖಂಡ ಅಧ್ಯಯನ ಮಾಡಿ ಸಕಲ ಶಾಸ್ತ್ರ ವೈದುಷ್ಯವನ್ನು ಪಡೆದರು. ೧೨ ಸಲ ಸುಧಾಮಂಗಳವನ್ನು ಮಾಡಿ ವೇದಾಂತ ದಿಗ್ದಂತಿಗಳಾದರು. ಪೇಜಾವರ ಮಠದ ವಿಶ್ವರಾಜತೀರ್ಥರು, ಶೀರೂರು ಮಠದ ಲಕ್ಷ್ಮೀವಲ್ಲಭತೀರ್ಥರು ಹಾಗೂ ಸೋದೆ ಮಠದ ವಿಶ್ವಾಧೀಶತೀರ್ಥರು ಈ ಯತಿವರೇಣ್ಯರ ಶಿಷ್ಯವರೇಣ್ಯರು. ನಾಲ್ಕು ಪರ್ಯಾಯ ಗಳನ್ನು ಸಾಂಗವಾಗಿ ನೆರವೇರಿಸಿದ ಯೋಗಿಗಳು. ತಮ್ಮ ಪ್ರಯಾಗ ಮಠದಲ್ಲಿ ಹಾಗೂ ದಂಡ ತೀರ್ಥದಲ್ಲಿ ಮುಖ್ಯಪ್ರಾಣ ಪ್ರತಿಷ್ಠೆಗೈದ ಮಹಾಮಹಿಮರು. ಜ್ಞಾನಭಕ್ತಿವೈರಾಗ್ಯನಿಧಿಗಳಾದ ಶ್ರೀ ಮಚ್ಚರಣರು ಮಠದ ಜೀರ್ಣೋದ್ಧಾರ ಮಾಡಿದ್ದಲ್ಲದೆ ಮಠದ ಆಸ್ತಿಯನ್ನು ಹೆಚ್ಚಿಸಿ ಮಠಕ್ಕೆ ಚಿನ್ನದ ಮಂಟಪವನ್ನು ಮಾಡಿಸಿದರು. ಪುತ್ತಿಗೆ ಮಠದ ಸುಮತೀಂದ್ರ ಶ್ರೀಗಳವರ ನಡತೆಯನ್ನು ಮೆಚ್ಚದೆ ಅದನ್ನು ಪ್ರತಿಭಟಿಸಿ ಕಾನೂನು ಮೂಲಕ ಅವರನ್ನು ಕೆಳಗಿಳಿಸಿ ಶತಾಯುಷಿಗಳಾಗಿ ಮೆರೆದ ಶ್ರೀ ಸುಧೀಂದ್ರತೀರ್ಥರನ್ನು ಮಠದ ಯತಿಗಳನ್ನಾಗಿ ಮಾಡಿದರು. ಇವರ

ದಿಟ್ಟ ಹೆಜ್ಜೆಯನ್ನು ಇಂದು ಹಾಗೂ ಮುಂದೆಯೂ ಅನುಸರಿಸಿದರೆ ಅಷ್ಟಮಠದಲ್ಲಿ ಆರೋಗ್ಯಕರ ಬೆಳವಣಿಗೆ ಆದೀತು. ತಮ್ಮ ವಾರ್ಧಕ್ಯಕಾಲದಲ್ಲಿ ತಿರುಪತಿ ತಿಮ್ಮಪ್ಪನ ದರ್ಶನ ಪಡೆದು ಬೆಂಗಳೂರಲ್ಲಿ ತಮ್ಮ ಕೊನೆಯುಸಿರೆಳೆ ದರು. ಅವರ ವೃಂದಾವನ ಇಂದಿಗೂ ಬೆಂಗಳೂರಿನ ಕೃಷ್ಣ ಮಂದಿರದಲ್ಲಿ ವಿರಾಜಮಾನವಾಗಿದೆ.

## ಶ್ರೀ ವಿದ್ಯಾಪೂರ್ಣತೀರ್ಥರು (೧೯ನೆಯ ಶತಮಾನ)

ಶ್ರೀವಿದ್ಯಾಧೀಶರ ಮನಸ್ಸಂಕಲ್ಪದಂತೆ ಶ್ರೀಪುತ್ತಿಗೆ ಮಠಾಧೀಶರಾದ ಶ್ರೀ ಸುಧೀಂದ್ರತೀರ್ಥರಿಂದ ಆಶ್ರಮ ಪಡೆದ ಯತಿಶ್ರೇಷ್ಠರೇ ಶ್ರೀ ವಿದ್ಯಾಪೂರ್ಣತೀರ್ಥರು. ಸುಧಾದಿ ಉದ್ಗ್ರಂಥಗಳ ತಳಸ್ಪರ್ಶಿ ಅಧ್ಯಯನ ಮಾಡಿರುವ ಈ ಪೂರ್ಣವಿದ್ಯರು ಶಾಂತಿಪಾಠ ಹೇಳದ ದಿನವೇ ಇರಲಿಲ್ಲ. ಮಾಧ್ವಯತಿವರೇಣ್ಯರ ಜಯಂತಿ ಹಾಗೂ ಪುಣ್ಯದಿನಗಳಲ್ಲಿ ಶ್ರೀಮಠದಲ್ಲಿ ಸಮಾರಾಧನೆ ತಪ್ಪುತ್ತಿರಲಿಲ್ಲ. ನಿತ್ಯದಾನ, ನಿತ್ಯೋತ್ಸವ, ನಿತ್ಯ ಮಂಗಳಕಾರ್ಯಗಳು ನಡೆಯುತ್ತಿದ್ದವು. ದೀನನಾಗಿ ಬಂದವನು ದಾನ ಸ್ವೀಕರಿಸದೆ ಹೋದದ್ದಿಲ್ಲ. ಅತಿ ವಿಜೃಂಭಣೆಯ ಇವರ ಮೂರು ಪರ್ಯಾಯಗಳಲ್ಲಿ ಶ್ರೀಕೃಷ್ಣ ಮಠದ ಜೀರ್ಣೋದ್ಧಾರ ಕೆಲಸಗಳು ನಡೆದವು. ಸೂರ್ಯಶಾಲೆ, ಚಂದ್ರಶಾಲೆ, ಕನಕನ ಕಿಂಡಿಯ ಎದುರಿನ ಗೋಪುರ, ಗರ್ಭಗುಡಿಯ ಮೇಲಿನ ದಶಾವತಾರ ಪ್ರತಿಮೆ ಹೀಗೆ ಬಹುರೀತಿಯ ಶ್ರೀಕೃಷ್ಣ ಸೇವೆ ನಡೆಸಿದರು. ಶ್ರೀ ವಿಬುಧಪ್ರಿಯರು ಆರಂಭಿಸಿದ್ದ ಚೌಕಿಯ ಕಟ್ಟಡ, ಅದರ ಉಪ್ಪರಿಗೆ ಪಾಕಶಾಲೆಗಳನ್ನೂ ನಿರ್ಮಿಸಿದರು. ಚೌಕಿಯ ಪಾಕಶಾಲೆಯ ಬಾವಿಯನ್ನು ಮಳೆಗಾಲದಲ್ಲೇ ದುರಸ್ತಿ ಮಾಡುವ ಸಂದರ್ಭದಲ್ಲಿ ಮಣ್ಣು ಕುಸಿಯಲಾರಂಭಿಸಿದಾಗ ಎಲ್ಲರೂ ಪ್ರಾಣದೇವರ ಗುಡಿ ಚಂದ್ರಶಾಲೆಗಳು ಕುಸಿದಾವು ಎಂದು ಉದ್ವೇಗಪಡಿಸಿದಾಗ ಈ ಹಠಯೋಗಿಗಳಿಗೆ ಸ್ವಪ್ನದಲ್ಲಿ ಮುಖ್ಯಪ್ರಾಣನ ಅಭಯದಾನ. ಸಂಜೀವಿನಿ ಪರ್ವತ ಹೊತ್ತ ಮಹಾಮಹಿಮ ಹನುಮ ಚಂದ್ರಶಾಲೆಯ ಅಡಿಪಂಚಾಂಗವನ್ನೇ ಹೊತ್ತ ಸ್ವಪ್ನ. ಶ್ರೀಕೃಷ್ಣ ಸೇವಾಸಕ್ತರ ಮೇಲೆ ಮುಖ್ಯಪ್ರಾಣನ ಕರುಣೆ. ಬಾವಿಯ ಕೆಲಸ ಸಾಂಗವಾಗಿ ನೆರವೇರಿ ಇಂದು ಚೌಕಿಯ ಭೋಜನಕ್ಕೆ ಯಥೇಚ್ಛ ನೀರು. ಗೋಪಾಲಬಾಲನಿಗೆ ಚಿನ್ನದ ಪಾಲಕಿಯನ್ನು ನಿರ್ಮಿಸಿ ಸಮರ್ಪಿಸಿದವರೂ ಇವರೇ. ಶ್ರೀಮಠದ ದುರಸ್ತಿ , ಮುಖ್ಯಪ್ರಾಣನ ಪ್ರತಿಷ್ಠೆ, ದೇವಾಲಯಗಳ ಜೀರ್ಣೋದ್ಧಾರ, ಕವಿಗೆ ಮನ್ನಣೆ, ಕಾವ್ಯಕ್ಕೆ ಟೀಕೆಟಿಪ್ಪಣಿಗಳನ್ನು ಬರೆಸಿ ಪ್ರಕಟಣೆ ಹೀಗೆ ಹತ್ತುಹಲವು ಸಾಹಸಗಳ ಬಹುಮುಖ ಪ್ರತಿಭೆಯವರು ಈ ಯತಿಕುಲಲಲಾಮರು. ಧರ್ಮನಿಷ್ಠರು, ಉದಾರಿಗಳು ವಿದ್ಯಾ ಪಕ್ಷಪಾತಿಗಳು. ಇವರ ವೃಂದಾವನವು ಉಡುಪಿಯ 'ವೃಂದಾವನ' ದಲ್ಲಿ ರಾರಾಜಿಸುತ್ತಿದೆ.

# ಶ್ರೀ ಪುತ್ತಿಗೆ ಮಠ

## ಶ್ರೀ ಉಪೇಂದ್ರತೀರ್ಥರು (೧೩ನೆಯ ಶತಮಾನ)

ಆಚಾರ್ಯ ಮಧ್ವರ ೮ ಮಂದಿ ಶಿಷ್ಯರಲ್ಲಿ ಒಬ್ಬರಾದ ಇವರು ಪುತ್ತಿಗೆ ಮಠದ ಮೂಲ ಯತಿಗಳು. ಶ್ರೀ ವಿಠಲನ ಭಜಕರು, ಆಚಾರ್ಯರ ಅನುಗ್ರಹದಿಂದ ಒಬ್ಬಂಟಿಗರಾಗಿಯೇ ಕೊಡಲಿ ಹಿಡಿದು ಕಳ್ಳರ ತಂಡವನ್ನೇ ಹಿಮ್ಮೆಟ್ಟಿಸಿದ ಶೂರರು. ಈ ಮಠದ ಬಹಳಷ್ಟು ಯತಿಗಳ ಚರಿತ್ರೆಯು ಅಷ್ಟೇನೂ ಪ್ರಸಿದ್ಧವಾಗದೇ ಇರುವುದು ನಮ್ಮ ದೌರ್ಭಾಗ್ಯ. ಶ್ರೀಮನ್ನ್ಯಾಯಸುಧಾಕ್ಕೆ ಔಚಿತ್ಯಪೂರ್ಣ ವ್ಯಾಖ್ಯಾನ ಬರೆದ ಮಧ್ವ ಸರೋವರಕ್ಕೆ ಸುತ್ತಲೂ ಕಲ್ಲುಗಳನ್ನು ಕಟ್ಟಿಸಿದ ಶ್ರೀ ರಾಘವೇಂದ್ರತೀರ್ಥರು ಹಾಗೂ

ಶ್ರೀಮದ್ಭಾಗವತಕ್ಕೆ ವೈದುಷ್ಯಪೂರ್ಣ ವ್ಯಾಖ್ಯಾನವನ್ನು ಬರೆದ ಶ್ರೀಯಾದವೇಂದ್ರರೂ ಪ್ರಖ್ಯಾತ ಯತಿಪುಂಗವರು.

## ಶ್ರೀ ಭುವನೇಂದ್ರತೀರ್ಥರು

ಶ್ರೀ ಪುತ್ತಿಗೆ ಮಠದ ಪರಂಪರೆಯಲ್ಲಿ ೨೩ನೆಯವರಾದ ಶ್ರೀ ಭುವನೇಂದ್ರತೀರ್ಥರು ಉದ್ದಾಮ ಪಂಡಿತರು. ಹಲವು ಮಠಗಳ ಯತಿಗಳಿಗೆ ವಿದ್ಯಾಗುರುಗಳು. ೧೨ ಬಾರಿ ಸುಧಾಮಂಗಳ ಮಾಡಿದ ಮಹಿಮಾನ್ವಿತರು. ೧೨ ಸಲ ಸುಧಾಮಂಗಳ ಮಾಡಿದ ಕೃಷ್ಣಾಪುರ ಮಠದ ಶ್ರೀ ವಿದ್ಯಾಧೀಶರ ಗುರುಗಳು. ತೀರ್ಥಹಳ್ಳಿಯಲ್ಲಿ ಮಠಕ್ಕೆ ಆಸ್ತಿಯನ್ನು ಸಂಪಾದಿಸಿಕೊಟ್ಟದ್ದಲ್ಲದೆ ತುಂಗಭದ್ರಾ ನದಿಯ ದಂಡೆಯಲ್ಲಿ ಸುಂದರ ಮಠವನ್ನು ಕಟ್ಟಿಸಿದರು. ಅನಂತೇಶ್ವರದ ಪೌಳಿಯನ್ನು ಕಟ್ಟಿಸಿ ಅನಂತಾಸನನ ಸೇವೆಯನ್ನು ಮಾಡಿದ್ದರು. ನಾಲ್ಕು ಪರ್ಯಾಯಗಳನ್ನು ಪೂರೈಸಿ ಶತಾಯುಷಿಗಳಾಗಿ ಬಾಳಿದ ಕೆಲವೇ ಯತಿಗಳಲ್ಲಿ ಇವರೂ ಓರ್ವರು. (ಪುತ್ತಿಗೆ ಮಠಕ್ಕೆ ಶತಾಯುಷಿಗಳ ಮಠವೆಂದೂ ಹೇಳುತ್ತಾರೆ.)

## ಶ್ರೀ ಸುಧೀಂದ್ರತೀರ್ಥರು (೧೯ನೆಯ ಶತಮಾನ)

ಶ್ರೀವಾದಿರಾಜರ ಅನಂತರ ಶತಾಯುಷಿಗಳಾಗಿ ಬಾಳಿ ದೇಹತ್ಯಾಗ ಮಾಡಿದ ಕೆಲವೇ ಯತಿಗಳಲ್ಲಿ ಓರ್ವರು. ಸುಧೀಂದ್ರತೀರ್ಥರು ಉಡುಪಿಯ ಇಂದಿನ ಯತಿಗಳಿಗೆ ಆದರ್ಶಪ್ರಾಯರಾಗಿ ಮೆರೆದ ಯೋಗಿವರೇಣ್ಯರು, ಶ್ರೀ ವಿದ್ಯಾಧೀಶರಿಂದ ರಾಮನವಮಿಯಂದು ಆಶ್ರಮ ಸ್ವೀಕರಿಸಿದ ಧರ್ಮಿಷ್ಠರು. ಜಪತಪ, ಸ್ನಾನ, ಸಂಧ್ಯಾವಂದನೆಗಳನ್ನು ತನ್ನ ಅತಿವೃದ್ಧಾವಸ್ಥೆಯಲ್ಲಿಯೂ ಅನೂಚಾನವಾಗಿ ಅನುಷ್ಠಾನ ಮಾಡಿದ ಕರ್ಮಠರು. ಶಾಪಾನುಗ್ರಹಶಕ್ತರಾದ ಇವರನ್ನು ಋಷ್ಯಶೃಂಗರೆಂದೂ ಕರೆಯುತ್ತಿದ್ದರು. ಗುರುಗಳಾದ ಶ್ರೀ ವಿದ್ಯಾಧೀಶರ ಅಚ್ಚುಮೆಚ್ಚಿನ ಶಿಷ್ಯರಾಗಿದ್ದು ಅವರ ವೃಂದಾವನದ ಸಮೀಪವೆ ತಾನು ಜೀವನಾಂತವನ್ನು ಹೊಂದಬೇಕೆಂದು ತಮ್ಮ ೬೦ನೆಯ ವಯಸ್ಸಿನಲ್ಲಿ 'ಸುಜ್ಞಾನೇಂದ್ರ'ರಿಗೆ ಆಶ್ರಮ ಕೊಟ್ಟು ಬೆಂಗಳೂರಿಗೆ ಹೋಗಿ ನೆಲೆಸಿದರೂ ಅವರ ದೀರ್ಘಾಯುಷ್ಯವು ಅವರನ್ನು ಅಲ್ಲಿರಗೊಡಲಿಲ್ಲ. ೪ ಪರ್ಯಾಯಗಳನ್ನು ವೈಭವದಿಂದ ನೆರವೇರಿಸಿದ ಇವರು 'ಯದುಕುಲತಿಲಕ'ರಾಗಿದ್ದರು. ಶ್ರೀಕೃಷ್ಣಾಪುರ ಮಠದ ಶ್ರೀ ವಿದ್ಯಾರತ್ನತೀರ್ಥರಿಗೆ ಆಶ್ರಮವಿತ್ತವರೂ ಇವರೇ. ಇವರ ವೃಂದಾವನವು ಉಡುಪಿಯಲ್ಲಿದೆ.

# ಶ್ರೀ ಸೋದೆಮಠ

## ಶ್ರೀ ವಿಷ್ಣುತೀರ್ಥರು (೧೩ನೆಯ ಶತಮಾನ)

ಶ್ರೀಮದಾನಂದತೀರ್ಥರ ಪ್ರಿಯ ಸಹೋದರರಾದ ಶ್ರೀ ವಿಷ್ಣುತೀರ್ಥರು ಸೋದೆಮಠದ ಪ್ರಥಮ ಪರಿವ್ರಾಜಕರು. ಆರಾಧ್ಯದೈವ ಶ್ರೀ ಭೂವರಾಹನ ಆರಾಧಕರಾದ ಇವರು ಮಹಾತಪಸ್ವಿಗಳು, ಅತಿವಿರಕ್ತರು. ಶ್ರೀಸುಬ್ರಹ್ಮಣ್ಯ ಮಠದ ಪರಂಪರೆಗೂ ಇವರೇ ಕಾರಣಕರ್ತರು. ಇವರಿಂದ ಸನ್ಯಾಸ ಸ್ವೀಕರಿಸಿದ ಶ್ರೀ ವ್ಯಾಸತೀರ್ಥರು ಸೋದೆ ಮಠವನ್ನೂ, ಶ್ರೀ ಅನಿರುದ್ಧತೀರ್ಥರು ಸುಬ್ರಹ್ಮಣ್ಯ ಮಠವನ್ನೂ ಬೆಳಗಿಸಿದರು. ಶ್ರೀ ಮದಾನಂದತೀರ್ಥರ ಜೀವನದ ಆಗುಹೋಗುಗಳನ್ನು ತಿಳಿಸುವ ಮಧ್ವವಿಜಯ ಪ್ರಮೇಯ ಮಾಲಿಕಾ, ವರ್ಣಾಶ್ರಮ ಧರ್ಮಗಳನ್ನು ವಿವರಿಸುವ ಸನ್ಯಾಸಪದ್ಧತಿ, ರಮಾಸ್ತೋತ್ರ ಹಾಗೂ ರಮೇಶಸ್ತುತಿ ಇವರ ಕೃತಿಗಳು. ಶ್ರೀವೇದವ್ಯಾಸರ ಅನುಗ್ರಹದಿಂದ ಇಚ್ಛಾಮರಣಿಗಳಾದ ಇವರು

ಇಂದಿಗೂ ಕುಮಾರಧಾರಾ ಪರ್ವತದಲ್ಲಿ ತಪಸ್ಸನ್ನಾಚರಿಸುತ್ತಾ ಆಚಾರ್ಯ ಮಧ್ವರು ತನ್ನ ಮೂಲ ರೂಪಕ್ಕೆ ಸೇರುವಾಗ ತತ್ತ್ವಜ್ಞಾನವು ಕಲುಷಿತವಾಗುವ ಆ ಸಂದರ್ಭದಲ್ಲಿ 'ಕಡ್ತಿಲ'ದಲ್ಲಿರುವ ತಾಮ್ರಶಾಸನ ರೂಪವಾದ ಆಚಾರ್ಯರ ಮೂಲ ಗ್ರಂಥವನ್ನು ಹೊರತೆಗೆದು ಪುನಃ ಮಧ್ವತತ್ತ್ವಜ್ಞಾನವನ್ನು ಪ್ರಸಾರ ಮಾಡುವರು ಎಂಬ ಈ ವಿಚಾರವನ್ನು ವಾದಿರಾಜರು ತಮ್ಮ 'ಸರಸ ಭಾರತೀವಿಲಾಸ'ದಲ್ಲಿ ತಿಳಿಸಿದ್ದಾರೆ. ವಾದಿರಾಜರು ಶ್ರೀ ವಿಷ್ಣುತೀರ್ಥರನ್ನು ಕುಮಾರ ಪರ್ವತದಲ್ಲಿ ಸಂದರ್ಶಿಸಿದಾಗ ಶ್ರೀ ವಿಷ್ಣುತೀರ್ಥರು ಅವರಿಗೆ ಕಡಗೋಲು ಕೃಷ್ಣನ ಸುಂದರ ವಿಗ್ರಹವನ್ನು ಕೊಟ್ಟಿದ್ದು ಈಗಲೂ ಶ್ರೀಮಠದಲ್ಲಿ ವಿರಾಜಮಾನವಾಗಿದೆ.

## ಶ್ರೀ ವೇದಾಂಗತೀರ್ಥರು (೧೪ನೆಯ ಶತಮಾನ)

ಈ ಮಠದ ಪರಂಪರೆಯಲ್ಲಿ ೧೦ನೆಯವರಾದ ಶ್ರೀ ವೇದಾತ್ಮತೀರ್ಥರು ಕೆಲವು ಮಾಧ್ವ ಗ್ರಂಥಗಳಿಗೆ ಟಿಪ್ಪಣಿಯನ್ನು ಬರೆದಿರುವರೆಂದು ಐತಿಹ್ಯವಿದೆ ಹಾಗೂ ವಾಯುಸ್ತುತಿಗೆ ವ್ಯಾಖ್ಯಾನ ರೂಪವಾದ 'ಕವಿಕರ್ಣಾಮೃತ' ಗ್ರಂಥವನ್ನು ರಚಿಸಿದ್ದಾರೆ. ಅವರ ಅನಂತರ ಪ್ರಸಿದ್ಧರಾದ ಶ್ರೀ ವೇದಾಂಗತೀರ್ಥರು ಮಠದ ಪರಂಪರೆಯಲ್ಲಿ ೧೩ನೆಯವರಾದರು. ಭಗವದ್ಗೀತೆಗೆ 'ಟಿಪ್ಪಣಿ' ಮಧ್ವವಿಜಯಕ್ಕೆ ವ್ಯಾಖ್ಯಾನ 'ಪದಾರ್ಥದೀಪಿಕೋದ್ಬೋಧಿನಿ' ಮಹಾಭಾರತ ತಾತ್ಪರ್ಯ ನಿರ್ಣಯಕ್ಕೂ ವ್ಯಾಖ್ಯಾನ ಇವು ಇವರ ಕೃತ್ಯಾತ್ಮಕ ಸಾಧನೆಗಳು. ಮಾಧ್ವ ತತ್ತ್ವಜ್ಞಾನದ ಆಳ ಅಧ್ಯಯನ ಮಾಡಿರುವ ಪಂಡಿತ ಶ್ರೇಷ್ಠ ರಾಜ ಇವರ ವೃಂದಾವನ ಬೀಳಗಿಯಲ್ಲಿದೆ.

## ಶ್ರೀ ವಾದಿರಾಜರು (ಕ್ರಿ.ಶ. ೧೪೮೦ -೧೬೦೦)

ಗುರು ಮಧ್ವರ ಅನಂತರ ಮಾಧ್ವ ಪರಿವ್ರಾಜಕ ಪರಂಪರೆಯಲ್ಲಿ ಬಹು ಪ್ರಸಿದ್ಧರು. ಉಡುಪಿಯ ಸರ್ವಾಂಗೀಣ ಪ್ರಗತಿಗೆ ಕಾರಣರೆಂದು ಉಡುಪಿಯ ಜನತೆ ಇಂದಿಗೂ ನೆನೆಯುವ ಮಾಧ್ವರು ಸರ್ವದಾ ಸ್ಮರಿಸುವ ಮಹಾಮಹಿಮರಾದ ಇವರು ವ್ಯಾಸಪಂಥದಲ್ಲಿ ಶ್ರೇಷ್ಠರು, ದಾಸಕೂಟದಲ್ಲಿ ಅಗ್ರಗಣ್ಯರು. ಭಾವೀ ಸಮೀರರೆಂದು ಪ್ರಖ್ಯಾತರು.

## ಶ್ರೀ ವಿಶ್ವಪ್ರಿಯತೀರ್ಥರು (೧೯ನೆಯ ಶತಮಾನ)

ಶ್ರೀಮಠದ ಪರಂಪರೆಯಲ್ಲಿ ೩೨ನೆಯವರಾದ ಶ್ರೀ ವಿಶ್ವಪ್ರಿಯತೀರ್ಥರು ವೃಂದಾವನಾಚಾರ್ಯರೆಂದೇ ಪ್ರಸಿದ್ಧರು. ಸೋದೆಯಲ್ಲಿರುವ ವಾದಿರಾಜರ ವೃಂದಾವನದೆದುರು ಕುಳಿತು ವಾದಿರಾಜರ ಅನುಗ್ರಹದಿಂದಲೇ ಸಕಲ ಶಾಸ್ತ್ರಗಳನ್ನು ಅಧ್ಯಯನ ಮಾಡಿದ್ದರಿಂದ ಇವರನ್ನು ವೃಂದವನಾಚಾರ್ಯರೆಂದೇ ಕರೆಯುತ್ತಿದ್ದರು. ಕೊಚ್ಚಿ ರಾಜರಾಗಲೀ ಮೈಸೂರಿನ ರಾಜರಾಗಲಿ ಇವರ ಪಾಂಡಿತ್ಯಕ್ಕೆ ಇವರ ನಿಸ್ಪೃಹತೆಗೆ ಮಾರು ಹೋಗಿ ಶ್ರೀ ಮಠಕ್ಕೆ ಉಂಬಳಿಯನ್ನು ಕೊಟ್ಟಿದ್ದಾರೆ. ಮೈಸೂರಿನ ಮಹಾರಾಜರಾದ ಮುಮ್ಮಡಿ ಕೃಷ್ಣರಾಜ ಒಡೆಯರು ಬರುವ ಸಂದರ್ಭದಲ್ಲಿ ಮಠದ ಮಹನೀಯರು ಶ್ರೀಗಳವರು ಕಾಷಾಯವಸನವನ್ನುಟ್ಟು ಜರಿಯ ಶಾಲು ತೊಟ್ಟು ಪೇಟಕಟ್ಟಿ ಮಹಾರಾಜರನ್ನು ಎದುರುಗೊಳ್ಳಬೇಕೆಂದು ಬಯಸಿದ್ದರು. ಕೌಪೀನಮಾತ್ರಧಾರಿಗಳಾದ ಈ ವಿರಾಗಿಗಳನ್ನು ಕಂಡ ಮೈಸೂರ ರಾಜರು ನಿಬ್ಬೆರಗಾದರು. ಪ್ರಭಾವಿತರಾಗಿ ನವರತ್ನಹಾರವನ್ನೆ ಅರ್ಪಿಸಿದರು. ಆದರೆ ಮಠ ಮಠಗಳ ವೈಮನಸ್ಯದಿಂದಾಗಿ ಕೇವಲ ತುಳಸೀಹಾರದ ಅಲಂಕಾರ ಮಾಡಿಯೇ ಶ್ರೀಕೃಷ್ಣನ ಪೂಜೆಗೈಯುತ್ತಿದ್ದ

ಯತಿಗಳು ಈ ಹಾರದಿಂದ ಶ್ರೀಕೃಷ್ಣನನ್ನು ಅಲಂಕರಿಸಲಿಲ್ಲ. ಅರಸು ಇನ್ನೂ ಮಂತ್ರಮುಗ್ಧರಾದರು. ಇವರ ಈ ಪ್ರವೃತ್ತಿಗೆ ಮೆಚ್ಚಿ ಕನಕಾಭಿಷೇಕ ಮಾಡಿದರು. ಆದರೆ ಆ ಬಂಗಾರದ ಎಲ್ಲಾ ನಾಣ್ಯಗಳನ್ನೂ ನೆರೆದ ಪಂಡಿತರಿಗೆ ವಿತರಣೆಗೈದ ಈ ವಿರಾಗಿಯ ಚರ್ಯೆಗೆ ರಾಜನು ಬೆಲೆಕಟ್ಟಲಾಗಲಿಲ್ಲ. ಮಠಮಠೀಯರ ಆವಾಂತರದಿಂದ ಉತ್ಸವಕ್ಕೆ ಸುಡುಮದ್ದು ಸಿಡಿಸುವುದಿಲ್ಲವೆಂದು ತಿಳಿದ ಶ್ರೀಗಳವರು ರಥದಿಂದ ಆರಂಭಿಸಿ ಬಹುದೂರದವರೆಗೆ ಕರ್ಪೂರವನ್ನು ಹಚ್ಚಿ ಮಂಗಳಾರತಿ ಮಾಡಿಸಿದರು. ಇಂದಿಗೂ ಉತ್ಸವದ ಸಂದರ್ಭದಲ್ಲಿ ರಥದಿಂದ ಆರಂಭಿಸಿ ಪೇಜಾವರ ಮಠದವರೆಗೂ ಕರ್ಪೂರ ಬೆಳಗಿಸುವ ಈ ಸೇವೆ ನಡೆಯುತ್ತಿದೆ. ಹೀಗೆ ತನ್ನದೇ ದಿಟ್ಟಪ್ರವೃತ್ತಿಯ ಇವರ ಚರ್ಯೆಯನ್ನು ಕಂಡ ಜನರು ಇವರನ್ನು 'ಅವಧೂತ'ರೆಂದೇ ಕರೆಯುತ್ತಿದ್ದರು. ಭಗವಂತನಲ್ಲಿ ಮುಖ್ಯಪ್ರಾಣನಲ್ಲಿ ಅಚಲಭಕ್ತಿಯುಳ್ಳ ಇವರನ್ನು ಅಪರೋಕ್ಷ ಜ್ಞಾನಿಗಳೆಂದೇ ತಿಳಿಯುತ್ತಿದ್ದರು. ಭಗವಂತನಿಗೆ ಅರ್ಪಿಸಿದ ಹಾಲುಮಾತ್ರ ಸೇವಿಸಿ ೧೨ ವರ್ಷಕಾಲ ಜೀವಿಸಿದ ಇವರು ಮಹಾಮಹಿಮರು, ನಿಗ್ರಹಾನುಗ್ರಹಶಕ್ತರು. ವಿಭೂತಿ ಪುರುಷರು.

## ಶ್ರೀ ವಿಶ್ವಾಧೀಶತೀರ್ಥರು (೨೦ನೆಯ ಶತಮಾನ)

ಈ ಮಠದ ಪರಂಪರೆಯಲ್ಲಿ ೩೩ನೆಯವರಾದ ಶ್ರೀ ವಿಶ್ವಾಧೀಶತೀರ್ಥರು ಉದ್ದಾಮ ಪಂಡಿತರು. ಇವರ ಪಾಂಡಿತ್ಯವನ್ನು ಮೆಚ್ಚಿ ವಿಕ್ಟೋರಿಯಾ ಮಹಾರಾಣಿಯವರು ಇವರಿಗೆ 'ಪಂಡಿತ ಶ್ರೇಷ್ಠ'ರೆಂಬ ಪ್ರಶಸ್ತಿ ಪತ್ರವನ್ನು ಕೊಟ್ಟಿದ್ದು ಇನ್ನೂ ಸೋದೆಮಠದ ದಾಖಲೆಯಲ್ಲಿ ಇದೆ. ಶ್ರೀಕೃಷ್ಣಾಪುರ ಮಠದ ವಿಶ್ವಾಧೀಶರಲ್ಲಿ ಶಾಸ್ತ್ರಾಧ್ಯಯನ ಮಾಡಿದ ಶ್ರೀಗಳವರು ಲೋಕಪ್ರಿಯರಾದ ವಿಬುಧಪ್ರಿಯರಿಗೆ ಗುರುಗಳು.

## ಶ್ರೀ ವಿಶ್ವೇಂದ್ರತೀರ್ಥರು (೨೦ನೆಯ ಶತಮಾನ)

ಶ್ರೀ ವಿಶ್ವಾಧೀಶತೀರ್ಥರ ಕರಕಮಲ ಸಂಜಾತರಾದ ಶ್ರೀ ವಿಶ್ವೇಂದ್ರತೀರ್ಥರು ಶ್ರೀ ವಿಬುಧಪ್ರಿಯ ತೀರ್ಥರ ಶಿಷ್ಯರು. ಕೊಚ್ಚಿಯ ರಾಜರಿಂದ ಮಾನಮನ್ನಣೆ ಪಡೆದ ಮಹಾವಿದ್ವಾಂಸರು, ಯೋಗಿಗಳು, ಉದಾರಿಗಳು, ಶಾಂತಸ್ವಭಾವದವರೂ ಆಗಿದ್ದರು. ಹಲವು ಘನರೋಗಗಳನ್ನು ಗುಣಪಡಿಸುವ ಕೈಗುಣವುಳ್ಳ ಆಯುರ್ವೇದ ಪಂಡಿತರೂ ಆಗಿದ್ದರು. ವಿದ್ಯಾಪೋಷಕರಾದ ಇವರು ಇನ್ನಂಜೆಯಲ್ಲಿ ಸ್ಥಾಪಿಸಿದ ಶ್ರೀವಿಷ್ಣುಮೂರ್ತಿ ಹಯವದನ ಹೈಸ್ಕೂಲ್ ಇಂದಿಗೂ ಉತ್ತಮ ವಿದ್ಯಾಭ್ಯಾಸಕ್ಕೆ ಪ್ರಸಿದ್ಧವಾಗಿದೆ. 'ಶ್ರೀಯುಕ್ತಿಮಲ್ಲಿಕಾ ಸೌರಭ ಪ್ರಕಾಶನೀಸಭಾ'ವನ್ನು ನಡೆಸಿ ಪಂಡಿತ ಪೋಷಕರಾಗಿದ್ದರು.

## ಶ್ರೀ ವಿಶ್ವೋತ್ತಮತೀರ್ಥರು

ಈಗ ಶ್ರೀಮಠದ ಪೀಠಾಧಿಪತಿಗಳಾದ ಶ್ರೀ ವಿಶ್ವೋತ್ತಮತೀರ್ಥರು ವಿರಕ್ತರು, ಪೂಜಾಪ್ರವಚನಾಸಕ್ತರು. ವರ್ಷದ ಕೆಲವೊಂದು ಮಾಸಗಳಲ್ಲಿ ಶ್ರೀ ಮಠದ ಅಧೀನದಲ್ಲಿರುವ ಪಂಜಿಮಾರು, ಸೋದೆ, ಉದ್ಯಾವರಾದಿ ಮಠಗಳಲ್ಲಿ ಭೂವರಾಹಾದಿ ದೇವರುಗಳ ಪೂಜೆಯನ್ನು ಮಾಡುತ್ತಾ ಮಠಗಳನ್ನು ಬಹುತರದಿಂದ ದುರಸ್ತಿ ಮಾಡಿಸಿದ್ದಾರೆ. ಮಾಡಿಸುತ್ತಲೂ ಇದ್ದಾರೆ. ಸರಳ ಸ್ವಭಾವದ ಮೃದುಭಾಷಿಯಾದ ಶ್ರೀಗಳವರು ಕೃಷ್ಣಾಪುರ ಮಠದ ಶ್ರೀ ವಿದ್ಯಾಸಾಗರ ತೀರ್ಥರಿಗೂ ಶೀರೂರು ಮಠದ ಶ್ರೀ ಲಕ್ಷ್ಮೀವರ ತೀರ್ಥರಿಗೂ ಗುರುಗಳು.

# ಶ್ರೀ ಶೀರೂರು ಮಠ

## ಶ್ರೀ ವಾಮನತೀರ್ಥರು (೧೩ನೆಯ ಶತಮಾನ)

ಇವರು ಶ್ರೀಮದಾನಂದತೀರ್ಥರ ಸಾಕ್ಷಾಚ್ಛಿಷ್ಯರು. ಉಪಾಸ್ಯಮೂರುತಿ ಶ್ರೀವಿಠಲನ ಪೂಜಕರು. ಈ ಮಠದ ಮೂಲಗುರುಗಳು. ಆಚಾರ್ಯರ ಸಹೋದರ ಶ್ರೀ ವಿಷ್ಣುತೀರ್ಥರ ಸಂಸ್ಥಾನ (ಸೋದೆಮಠ) ಹಾಗೂ ಇವರ ಮಠ ದ್ವಂದ್ವಮಠಗಳು. ತೀರ್ಥಯಾತ್ರೆ ಮಾಡುತ್ತಾ ಪರಮಪಾವನ ಬದರೀಕ್ಷೇತ್ರದಲ್ಲೇ ಹರಿಪದವನ್ನೈದಿದ ಪುಣ್ಯಜೀವಿಗಳು. ಇವರ ಅನಂತರ ಇವರ ಶಿಷ್ಯರಾದ ಶ್ರೀ ವಾಸುದೇವ ತೀರ್ಥರು ವೇದವಾಕ್ಯಕ್ಕೆ ಸತ್ಯತ್ವ ಸಮರ್ಥನೆ ಮಾಡುತ್ತಾ ಆಚಾರ್ಯ ಮಧ್ವರಂತೆ ವೇದಋಕ್ಕನ್ನ, ಹಾಡಿ ಒಣಗಿದ ಮರವನ್ನು ಚಿಗುರಿಸಿದ ಮಹಾತ್ಮರು. ಅವರ ಶಿಷ್ಯರಾದ ಶ್ರೀ ಪುಣ್ಯಶ್ಲೋಕ ತೀರ್ಥರು ಮುಖ್ಯಪ್ರಾಣವನ್ನು ಒಲಿಸಿಕೊಂಡು ಮಹಾತಪಸ್ವಿಗಳು, ಮೇಧಾವಿಗಳು, ಜ್ಞಾನಿಗಳು. ಟೀಕಾಕೃತ್ಪಾದರ ಪ್ರಮಾಣ ಪದ್ಧತಿಗೆ ವ್ಯಾಖ್ಯಾನವನ್ನು ಬರೆದವರು. ಶ್ರೀ ವೇದವ್ಯಾಸತೀರ್ಥರು ತ್ರಿಕಾಲ ಜ್ಞಾನಿಗಳು ಎಂಬ ಐತಿಹ್ಯವಿದೆ. ಹೆಂಗಸೊಬ್ಬಳಿಗೆ ತೀರ್ಥ ಕೊಡದಿದ್ದಾಗ ಅವಳ ಪತಿ ಮರಣದ ವಾರ್ತೆ ತಿಳಿದು ಅವಳು ಆ ಸಮಯದಲ್ಲಿ ಅಶುದ್ಧಳೆಂದು ತಿಳಿಯಿತು. ಮಹಾವಿದ್ವಾಂಸರಾದ ಶ್ರೀ ವೇದವೇದ್ಯ ತೀರ್ಥರು ಭಾಷ್ಯ ಪಾರಾಯಣದಿಂದಲೇ ಮಹೋದರ ರೋಗವನ್ನು ಗುಣಪಡಿಸಿಕೊಂಡ ಮಹಾತ್ಮರು, ಸ್ವತಃ ಸಂಗೀತಜ್ಞರಾದ ಶ್ರೀಕೃಷ್ಣ ತೀರ್ಥರು ಗಾನಲೋಲ ಶ್ರೀಕೃಷ್ಣನನ್ನು ಗೆಜ್ಜೆ ಕಟ್ಟಿಸಿ ಕುಣಿಸಿದ ಮಹನೀಯರು. ೧೨ ಸಲ ಸುಧಾಮಂಗಲವನ್ನು ಮಾಡಿದ ಶ್ರೀ ಶ್ರೀನಿವಾಸತೀರ್ಥರು ಗೀತಾಭಾಷ್ಯಕ್ಕೆ ಸುಖಬೋಧಿನಿ ಟೀಕೆ ಬರೆದ ಶ್ರೀ ವೇದನಿಧಿ ತೀರ್ಥರು. 'ಶ್ರಿಕೃಷ್ಣಲೀಲಾ' ಕಾವ್ಯಕರ್ತೃಗಳಾದ ಶ್ರೀ ಶ್ರೀಧರ ತೀರ್ಥರು ಉದ್ದಾಮ ಪಂಡಿತರು, ಕವಿಗಳೂ ಆಗಿದ್ದರು. ಪಾಪುಜ ಮಠದಲ್ಲಿ ಶ್ರೀ ವೇಣುಗೋಪಾಲನನ್ನು ಪ್ರತಿಷ್ಠಾಪಿಸಿದ ಶ್ರೀ ಲಕ್ಷ್ಮೀಪತಿತೀರ್ಥರು ಶ್ರೀಕೃಷ್ಣನ ಪರಮಾನುಗ್ರಹಕ್ಕೆ ಪಾತ್ರರಾದ ಪರಿವ್ರಾಜಕರು.

## ಶ್ರೀ ಲಕ್ಷ್ಮೀರಮಣತೀರ್ಥರು (೧೮ನೆಯ ಶತಮಾನ)

ಈ ಮಠದ ಪರಂಪರೆಯಲ್ಲಿ ೨೩ನೆಯವರಾದ ಶ್ರೀ ಲಕ್ಷ್ಮೀರಮಣ ತೀರ್ಥರು ತೊಟ್ಟಿಲ ಕೂಸಾಗಿದ್ದಾಗ ಹೆಡೆಬಿಚ್ಚಿನಿಂತ ಹಾವಿನೊಡನೆ ಆಡಿದ ಅಸಾಮಾನ್ಯರು. ಬಾಲ್ಯಸ್ನೇಹಿತರಾದ ದಿವಾನ ಮುದ್ರಾಡಿ ಅನಂತಯ್ಯನವರು ಮಠಕ್ಕೆ ಶೀರೂರು ಗ್ರಾಮವನ್ನು ಉಂಬಳಿಯಾಗಿ ಕೊಟ್ಟು ಅಲ್ಲಿ ಮಠವನ್ನೂ ಕಟ್ಟಿಸಿ ಬಾಲ್ಯದಲ್ಲಿ ಹಾಸ್ಯಕ್ಕಾಗಿ ಆಡಿದ್ದ ಮಾತನ್ನು ಸತ್ಯಗೊಳಿಸಿದರು. ಅಂದಿನಿಂದ ಈ ಮಠ ಶೀರೂರು ಮಠವೆಂದೇ ಪ್ರಸಿದ್ಧವಾಯಿತು. ಇವರ ಸವಿನೆನಪಿಗಾಗಿ ಮುದ್ರಾಡಿ ಅನಂತಯ್ಯನವರು ಶ್ರೀ ಲಕ್ಷ್ಮೀರಮಣತೀರ್ಥರ ಶಿಷ್ಯ ಶ್ರೀ ಲಕ್ಷ್ಮೀಮನೋಹರ ತೀರ್ಥರ ಕಾಲದಲ್ಲಿ ಉಡುಪಿಯ ಮಠವನ್ನು ಸುಂದರವಾಗಿ ಕಟ್ಟಿಸಿದರು.

## ಶ್ರೀ ಲಕ್ಷ್ಮೀವಲ್ಲಭತೀರ್ಥರು (೧೯ನೆಯ ಶತಮಾನ)

ಶೀರೂರು ಮಠದ ಪರಂಪರೆಯಲ್ಲಿ ೨೬ನೆಯವರಾದ ಶ್ರೀಗಳವರು ಮಹಾಮಹಿಮರು. ಐದುಸಲ ವಿಷ್ಣುಪಂಚಕವನ್ನೂ ಮೂರುಸಲ ಸುಧಾಮಂಗಳವನ್ನೂ ಒಂದು ಸಲ ಭಾಗವತ ಸಪ್ತಾಹವನ್ನೂ ಮಾಡಿದ ಪಂಡಿತವರೇಣ್ಯರು ಹಾಗೂ ಮಹಾವ್ರತಿಗಳು. ತೀರ್ಥಯಾತ್ರೆ ಮಾಡಿ ತಮ್ಮ ಪ್ರಭಾವದಿಂದ ಮಠಕ್ಕೆ ಬಹು ಭೂಮಿಯನ್ನು ಸಂಪಾದಿಸಿದರು. ಏಕಾದಶಿ ಶುದ್ಧೋಪವಾಸ ಮಾಡಿ ದ್ವಾದಶಿ ಪುಣ್ಯತಿಥಿಯಲ್ಲಿ

ಶ್ರೀ ವಿಠಲ ದೇವರಿಗೆ ಮಂಗಳಾರತಿ ಮಾಡುತ್ತಿದ್ದ ಇವರ ಎತ್ತಿದ ಕೈ ಎತ್ತಿಯೇ ಇತ್ತು, ನೇರನೋಟ ವಿಠಲನಲ್ಲಿ ನೆಟ್ಟಿತ್ತು. ಆದರೆ ಈ ಪುಣ್ಯ ಜೀವಿಗಳು ಮಾತ್ರ ಇನ್ನಿಲ್ಲವಾದರು.

### ಶ್ರೀ ಲಕ್ಷ್ಮೀಸಮುದ್ರತೀರ್ಥರು (೧೯ನೆಯ ಶತಮಾನ)

ಶ್ರೀ ಲಕ್ಷ್ಮೀವಲ್ಲಭತೀರ್ಥರಿಂದ ಆಶ್ರಮವನ್ನು ಪಡೆದ ಶೀರೂರು ಮಠದ ಪರಂಪರೆಯಲ್ಲಿ ೨೭ನೆಯವರಾದ ಶ್ರೀ ಲಕ್ಷ್ಮೀಸಮುದ್ರತೀರ್ಥರು ಧರ್ಮಕಾರ್ಯಗಳಲ್ಲಿ ಆಸಕ್ತರು. ಶ್ರೀಕೃಷ್ಣನಿಗೆ ನಡೆಯುವ ಗರುಡೋತ್ಸವವು ಶ್ರೀಮಚ್ಚರಣರು ಕಟ್ಟಿಸಿದ ಮಧ್ಯಮ ರಥದಲ್ಲಿಯೇ ನಡೆಯುತ್ತಿದೆ. ಈ ಅನ್ನಬ್ರಹ್ಮನ ಸೇವೆಗಾಗಿ ಭೂಸುರರಿಗೆ ಭೂರಿ ಭೋಜನಕ್ಕಾಗಿ ಉಪ್ಪರಿಗೆ ಸಮೇತವಾದ ಭೋಜನಶಾಲೆಯನ್ನು ಶಿಲಾಮಯವಾಗಿ ಕಟ್ಟಿಸಿದ್ದಲ್ಲದೆ, ಮಕ್ಕಳಿಲ್ಲದವರು 'ಇಲ್ಲಿಯ ನೆಲದಲ್ಲಿ ಊಟ ಮಾಡಿ ಮಕ್ಕಳನ್ನು ಪಡೆಯುವ' ಕಾರಣಿಕಕ್ಕೆ ಕಾರಣನಾದ ಮಹಾಮಹಿಮ ಹನುಮನನ್ನು (ಪ್ರಾಣದೇವರು) ಇಲ್ಲಿ ಪ್ರತಿಷ್ಠಾಪಿಸಿದರು. ಮಧ್ವಸರೋವರದ ಬಳಿಯಲ್ಲಿ ಕಂಗೊಳಿಸುವ ಭೋಜನಶಾಲೆ ಶ್ರೀ ಲಕ್ಷ್ಮೀಸಮುದ್ರತೀರ್ಥರ ಸ್ಮಾರಕವಾಗಿ ಇಂದಿಗೂ ಬಡಬ್ರಾಹ್ಮಣರ ಅನ್ನದೇಗುಲವಾಗಿ ಮೆರೆಯುತ್ತಿದೆ.

### ಶ್ರೀ ಲಕ್ಷ್ಮೀಂದ್ರತೀರ್ಥರು (೨೦ನೆಯ ಶತಮಾನ)

ದ್ವಂದ್ವಮಠವಾದ ಶ್ರೀ ಸೋದೆ ಮಠದ ಶ್ರೀ ವಿಶ್ವೇಂದ್ರತೀರ್ಥರಿಂದ ಆಶ್ರಮ ಸ್ವೀಕರಿಸಿದ ಶ್ರೀ ಲಕ್ಷ್ಮೀಂದ್ರತೀರ್ಥರು ಶೀರೂರು ಮಠದ ಯತಿಪುಂಗವರು. ಮಾಧ್ವಯತಿಗಳ ಪರಂಪರೆಯಲ್ಲಿ ಇತಿಹಾಸ ನಿರ್ಮಿಸಿದ ಶ್ರೀ ಉತ್ತರಾದಿ ಮಠದ ಸತ್ಯಧ್ಯಾನತೀರ್ಥರ ಶಿಷ್ಯರಾಗಿ ಸುಧಾಂತ ವೇದಾಂತಾಧ್ಯಯನ ಮಾಡಿದ ಉದ್ದಾಮ ಪಂಡಿತರು. ಉತ್ತಮ ವಾಗ್ಮಿಗಳೂ ಅಧ್ಯಾಪನ ಕುಶಲಿಗಳೂ ಆಗಿದ್ದರು. ಮಾಧ್ವಮುನಿಸಂಘಕ್ಕೆ 'ಕಥಾಲಕ್ಷಣ' ಎಂಬ ಕನ್ನಡ ಗ್ರಂಥವನ್ನು ಬರೆದುಕೊಟ್ಟು ಮಾಧ್ವಮತದ ಗ್ರಂಥಗಳ ಪ್ರಕಟಣೆಗೆ ಪ್ರೋತ್ಸಾಹವನ್ನಿತ್ತರು. 'ಗೀತಾದರ್ಶ', 'ದ್ವೈತದರ್ಶನ' ಇವು ಇವರ ಪಾಂಡಿತ್ಯವನ್ನು ಸೂಚಿಸುವ ಕನ್ನಡ ಗ್ರಂಥಗಳು. ಸೂಕ್ತಮಾಲಾದ ಅನೇಕ ಗ್ರಂಥಗಳನ್ನು ಪ್ರಕಟಿಸಿದರು. ಸ್ವತಃ ಆಯುರ್ವೇದ ಪಂಡಿತರಾಗಿ ಉತ್ತಮ ಚಿಕಿತ್ಸಕರೂ ಆಗಿದ್ದರು. ಸೋಮಯಾಗವನ್ನು ಮಾಡಿದ ಧರ್ಮಿಷ್ಠರು. ೩ ಸಲ ಸುಧಾಮಂಗಳವನ್ನು ಮಾಡಿದ ಜ್ಞಾನಿವರೇಣ್ಯರು.

## ಶ್ರೀ ಕಾಣಿಯೂರು ಮಠ

### ಶ್ರೀ ವಿದ್ಯಾಸಮುದ್ರತೀರ್ಥರು (೨೦ನೆಯ ಶತಮಾನ)

ಉಡುಪಿಯ ಯತಿಗಳಲ್ಲಿ ಕೆಲವರು ಆಚಾರಕ್ಕೆ ಪ್ರಾಧಾನ್ಯವನ್ನು ಕೊಟ್ಟರೆ ಕೆಲವರು ವಿಚಾರಕ್ಕೆ ಬೆಲೆ ಕೊಟ್ಟವರು. ಸ್ವತಃ ಪಂಡಿತರಾದರೂ ಶ್ರೀ ನೃಸಿಂಹ ದೇವರ ಪೂಜೆಯಲ್ಲಿಯೇ ಜೀವನದ ಧನ್ಯತೆಯನ್ನು ಕಂಡುಕೊಂಡ ಆಚಾರ್ಯಶ್ರೇಷ್ಠರು ಶ್ರೀ ವಿದ್ಯಾಸಮುದ್ರ ತೀರ್ಥರು. ಈ ಮಠದ ಪರಂಪರೆಯಲ್ಲಿ ೨೮ನೆಯ ಬಾಲಬ್ರಹ್ಮಚಾರಿಗಳು ಕಟ್ಟಾಬ್ರಹ್ಮಚರ್ಯವನ್ನು ಬೆಳೆಸಿಕೊಳ್ಳಬೇಕೆಂದು ತುಳಸಿಯನ್ನು ಅತಿಯಾಗಿ ಭಕ್ಷಿಸಿದ್ದರಿಂದ ಮೂತ್ರರೋಗದಿಂದ ಬಳಲುತ್ತಿದ್ದರೂ ಹತ್ತು ಹಲವು ಬಾರಿ ಸ್ನಾನ ಮಾಡಿಯಾದರೂ ನೃಸಿಂಹ ಪೂಜೆಯನ್ನು ಮಾಡಿ ಪ್ರಸಾದ ಸ್ವೀಕರಿಸುತ್ತಿದ್ದರು. ಇವರ ಕಾಲದಲ್ಲಿ ಭಿಕ್ಷೆಯಾಗುವ ಸಮಯ ಸಾಯಂಕಾಲದ ನಾಲ್ಕು ಘಂಟೆ. ಜಪತಪಗಳಿಗೆ ಹೆಚ್ಚಿನ ಪ್ರಾಶಸ್ತ್ಯವನ್ನಿತ್ತು, ಇವರನ್ನು ಶಾಸ್ತ್ರಾರ್ಥದಲ್ಲಿ

ಯಾರಾದರೂ ಕೆಣಕಿದರೆ ತತ್ತ್ವಜ್ಞಾನದ ತಿರುಳುಗಳನ್ನೇ ಹೊರಗೆಡವುತ್ತಿದ್ದರು. ಶ್ರೀ ವಿಬುಧಪ್ರಿಯ ತೀರ್ಥರ ಅಚ್ಚುಮೆಚ್ಚಿನ ಶಿಷ್ಯರು, ಮಹಾತಪಸ್ವಿಗಳು. ಸದಾಕಾಲವೂ ಜಪತಪ ಪೂಜಾಪ್ರವಚನಗಳಲ್ಲಿ ನಿರತರಾಗಿದ್ದ ಇವರು ಪರಿವ್ರಾಜಕರೆಂದರೆ ಹೇಗಿರಬೇಕೆನ್ನುವುದನ್ನು ಎತ್ತಿ ತೋರಿಸಿದ ಯತಿಕುಲದ ಅಮರರು.

## ಶ್ರೀ ವಿದ್ಯಾವಾರಿನಿಧಿತೀರ್ಥರು

ಕೆಲವೊಂದು ಹೊಸತುಗಳನ್ನು ತಮ್ಮ ಮೊದಲ ಪರ್ಯಾಯದಲ್ಲಿ ಆರಂಭಿಸಿ ಯಶಸ್ವಿಯಾಗಿ ತಮ್ಮ ಮೊದಲ ಪರ್ಯಾಯವನ್ನು ನಿರ್ವಹಿಸಿದ ಶ್ರೀಗಳವರು ಶ್ರೀಮಠದ ಪರಂಪರೆಯಲ್ಲಿ ೨೯ನೆಯವರು.

# ಶ್ರೀ ಪೇಜಾವರ ಮಠ

## ಶ್ರೀ ಅಧೋಕ್ಷಜತೀರ್ಥರು (೧೩ನೆಯ ಶತಮಾನ)

ಶ್ರೀ ಪೇಜಾವರ ಮಠದ ಮೂಲ ಯತಿಗಳಾದ ಶ್ರೀ ಅಧೋಕ್ಷಜತೀರ್ಥರು ಆಚಾರ್ಯ ಮಧ್ವರ ಸಾಕ್ಷಾತ್ ಶಿಷ್ಯರು. ಶ್ರೀವಿಠಲನ ಆರಾಧಕರು. ಶ್ರೀ ವಿಶ್ವೇಶತೀರ್ಥರು ಮೂಲ ಯತಿಗಳ ನೆನಪಿಗಾಗಿ ಮಠದ ನೆಲದಲ್ಲೇ ಶ್ರೀ ಅಧೋಕ್ಷಜ ಮಂದಿರವನ್ನು ಕಟ್ಟಿಸಿದ್ದಾರೆ. ಶ್ರೀ ಅಧೋಕ್ಷಜತೀರ್ಥರ ಶಿಷ್ಯರಾದ ಶ್ರೀ ಕಮಲಾಕ್ಷ ತೀರ್ಥರು 'ಹರಿಗಾಥಾ' ಎಂಬ ಹಾಡುಗಬ್ಬವನ್ನು ರಚಿಸಿದ್ದಾರೆ.

## ಶ್ರೀ ವಿಜಯಧ್ವಜತೀರ್ಥರು (೧೪ನೆಯ ಶತಮಾನ)

ಈ ಮಠದ ಪರಂಪರೆಯಲ್ಲಿ ಶ್ರೀ ವಿಜಯಧ್ವಜರು ಜಗತ್ಪ್ರಸಿದ್ಧ ಯತಿಪುಂಗವರು. ತಮ್ಮ ಅಸಾಧಾರಣ ಪಾಂಡಿತ್ಯದಿಂದ ಮಾಧ್ವಯತಿಗಳಲ್ಲಿ ಮಾತ್ರವಲ್ಲ ವ್ಯಾಖ್ಯಾನಕಾರರಲ್ಲೇ ವಿಶಿಷ್ಟ ಸ್ಥಾನವನ್ನು ಪಡೆದಿದ್ದಾರೆ. ಇವರ ಭಾಗವತ ವ್ಯಾಖ್ಯಾನ ಇಂದು ಪ್ರಸಿದ್ಧವಾದ ಭಾಗವತದ ಎಂಟು ವ್ಯಾಖ್ಯಾನಗಳಲ್ಲಿ ಅತ್ಯುತ್ಕೃಷ್ಟವೆಂದು ಜಗಮನ್ನಣೆಯನ್ನು ಪಡೆದಿದೆ. ಜೀವನದ ಬಹುಕಾಲ ಕಣ್ವತೀರ್ಥದ ಮಠದಲ್ಲೇ ವಾಸಿಸುತ್ತಿದ್ದ ಈ ಪರಿವ್ರಾಜಕರು ಪ್ರವಚನ ಕಾಲದಲ್ಲಿ ಮರವೊಂದರ ಎಲೆಗಳ ತಟತಟ ಸದ್ದು ವಿಘ್ನಕರವಾಗಲು ಕೈಮೇಲೆತ್ತಿ ಸದ್ದು ನಿಲ್ಲಿಸಲು ಆಜ್ಞೆ ಮಾಡಿದರು. ಆ ವೃಕ್ಷದ ಎಲೆಗಳು ಇಂದಿಗೂ ಅಲ್ಲಾಡುವುದಿಲ್ಲ. ವಿಭೂತಿಪುರುಷರಾದ ಯತಿವರೇಣ್ಯರು ಯಮಕ ಭಾರತಕ್ಕೂ ಮಹಾಭಾರತ ತಾತ್ಪರ್ಯನಿರ್ಣಯಕ್ಕೂ ಸುಲಲಿತ ವ್ಯಾಖ್ಯಾನವನ್ನು ಬರೆದಿದ್ದಾರೆ.

## ಶ್ರೀ ವಿಶ್ವಪತಿತೀರ್ಥರು (೧೮ನೆಯ ಶತಮಾನ)

ಆಚಾರ್ಯ ಮಧ್ವರಿಗೆ ಪರಮ ಪ್ರೀತ್ಯಾಸ್ಪದ ಐತರೇಯೋಪನಿಷತ್ತಿನ ಭಾಷ್ಯಕ್ಕೆ ಸುಂದರವಾದ ಟೀಕೆಯನ್ನು ಬರೆದ ಶ್ರೀ ವಿಶ್ವೇಶ್ವರತೀರ್ಥರ ಬಳಿಕ ಬಹು ಪ್ರಸಿದ್ಧರಾದವರು. ಈ ಮಠದ ಪರಂಪರೆಯಲ್ಲಿ ೨೧ನೆಯವರಾದ ಶ್ರೀ ವಿಶ್ವಪತಿತೀರ್ಥರು ಅನೇಕ ಮಧ್ವ ಗ್ರಂಥಗಳಿಗೆ ಸುಲಲಿತ ವ್ಯಾಖ್ಯಾನವನ್ನು ಬರೆದಿದ್ದಾರೆ. ಇವರು ದ್ವಾದಶಸ್ತೋತ್ರ, ಚತುರ್ದಶಸ್ತೋತ್ರ, ಪಂಚಸ್ತುತಿ, ಮಧ್ವವಿಜಯ, ಮಣಿಮಂಜರಿ ಹಾಗೂ ಸಂಗ್ರಹ ರಾಮಾಯಣಗಳಿಗೆ ಉತ್ತಮ ವ್ಯಾಖ್ಯಾನವನ್ನು ರಚಿಸಿದ ಟೀಕಾಕಾರರು.

## ಶ್ರೀ ವಿಶ್ವೇಶತೀರ್ಥರು

ಕ್ರಾಂತಿಕಾರಿಗಳಲ್ಲಿ ಸಂಪ್ರದಾಯವಾದಿಗಳಾದ ಸಂಪ್ರದಾಯವಾದಿಗಳಲ್ಲಿ ಕ್ರಾಂತಿಕಾರರಾದ

ಶ್ರೀ ವಿಶ್ವೇಶತೀರ್ಥರು ಶ್ರೀ ಮಠದ ಪರಂಪರೆಯಲ್ಲಿ ೩೩ನೆಯವರು. ವಾಮನಮೂರ್ತಿ ಆದರೆ ತ್ರಿವಿಕ್ರಮ ಕೀರ್ತಿ. ಎಲ್ಲರೂ ಅತಿ ಹೆಚ್ಚು ಪ್ರೇಮಿಸುವ, ಕೊಂಡಾಡುವ ಕೆಲವೊಮ್ಮೆ ತೆಗಳುವ, ದ್ವೇಷಿಸುವ ಸಂಕೀರ್ಣ ವ್ಯಕ್ತಿತ್ವ ಇವರದು. ಇಂದಿನ ಪ್ರಕಾಂಡ ಪಂಡಿತರಾದ ವಿದ್ಯಾಮಾನ್ಯ ತೀರ್ಥರ ಅದ್ವಿತೀಯ ಶಿಷ್ಯರಾದ ಇವರ ಪಾಂಡಿತ್ಯ ಎಗ್ಗಿಲ್ಲದ್ದು. ಮಾಧ್ವ ಜನತೆಯ ಆಶೋತ್ತರಗಳನ್ನು ಈಡೇರಿಸುವ ಮಾಧ್ವ ಮಹಾಮಂಡಲ, ಮಾಧ್ವವಾಙ್ಮಯ ಅಧ್ಯಯನಕ್ಕಾಗಿ ಬೆಂಗಳೂರಿನಲ್ಲಿ ಪೂರ್ಣಪ್ರಜ್ಞ ವಿದ್ಯಾಪೀಠ, ಮಾಧ್ವ ತತ್ತ್ವಜ್ಞಾನ ಪ್ರಸಾರಕ್ಕಾಗಿ ತತ್ತ್ವವಾದ ಮಾಸಪತ್ರಿಕೆ, ನಾನಾ ಜನರ ಶುಶ್ರೂಷೆಗಾಗಿ ಜನತಾ ಕಲ್ಯಾಣ ನಿಧಿ, ಹತ್ತಾರು ವರ್ಷಗಳಲ್ಲಿ ಹತ್ತಾರು ಕಡೆ ಸಮ್ಮೇಳನಗಳು, ಜ್ಞಾನಸತ್ರಗಳು, ಹತ್ತಾರು ವಿದ್ಯಾರ್ಥಿ ನಿಲಯಗಳು ಇವೆಲ್ಲವೂ ಇವರ ಸಾಧನೆಗಳು. ಕೊಡುವವರ ಕೈ ಮೊಟಕಲ್ಲ. ಈ ಜೋಗಿಯ ಜೋಳಿಗೆ ಚಿಕ್ಕದಿಲ್ಲ. ಜನತಾಜನಾರ್ದನನ ಸಾರ್ಥಕ ಸೇವೆಗೆ ಟೊಂಕಕಟ್ಟಿದ ಇವರು ಬರಗಾಲ ಬಂದಾಗ ಕಲಬುರ್ಗಿಗೆ ಧಾವಿಸಿದರು. ನೆರೆಬಂದಾಗ ಹಂಸಲದಿವಿಗೆ ಧಾವಿಸಿದರು. ಮತಾಂತರದ ಆವಾಂತರವಾದಾಗ ಮೀನಾಕ್ಷಿಪುರದತ್ತ ಧಾವಿಸಿದರು. ಹಿಂದೂರಕ್ಷೆಯೇ ದೀಕ್ಷೆಯಾಗಿ ಉಳ್ಳ ಇವರು ಹಿರಿಮೆಗಳ ಆಶಾ ಜ್ಯೋತಿ. ಏಳು ವರ್ಷದಲ್ಲೇ ಪರಿವ್ರಾಜಕನಾಗಿ ೧೭ನೇ ವರ್ಷದಲ್ಲಿ ಪ್ರಥಮ ಪರ್ಯಾಯ ನಡೆಸಿದ ಇವರ ಎರಡನೆಯ ಪರ್ಯಾಯದಲ್ಲಿ ಶ್ರೀಕೃಷ್ಣ ಮಠದ ಸ್ವರೂಪವೇ ಬದಲಾಯಿತು. ನವೀಕೃತ ಬಡಗು ಮಾಳಿಗೆ, ಸುಂದರವಾದ ಹಾಸುಗಲ್ಲುಗಳಿಂದ ಶೋಭಿಸುವ ಶ್ರೀಕೃಷ್ಣ ಮಠ, ಅಚ್ಚುಕಟ್ಟಾದ ಛತ್ರಗಳು, ನಿತ್ಯ ಪಾರಾಯಣ ಪೂಜೆ, ಸಂಗೀತ ಹರಿಕಥೆ, ಬ್ರಹ್ಮರಥೋತ್ಸವ, ಬೆಳ್ಳಿರಥ ಎಳೆಯೋಣ, ಚಿನ್ನದ ಪಲ್ಲಕಿ ಉತ್ಸವ. ಎರಡನೆಯ ಪರ್ಯಾಯದ ಸಂಭ್ರಮವನ್ನು ಉಡುಪಿಯ ಜನತೆ ಇನ್ನೂ ಮರೆತಿಲ್ಲ. ಆಗಲೇ ಮೂರನೆಯ ಪರ್ಯಾಯದಲ್ಲಿ ಹಮ್ಮಿಕೊಂಡ ಕಾರ್ಯಕ್ರಮಗಳು ಹತ್ತು ಹಲವು. ಆಚಾರ್ಯರಿಗೆ ಪ್ರೀತ್ಯಾಸ್ಪದ ಬದರಿಯಲ್ಲಿ ಅನಂತ ಮಠವಾಯಿತು. ಆಚಾರ್ಯರ ಜನ್ಮಭೂಮಿ ಪಾಜಕದಲ್ಲೇನಿದೆ? ನವೀಕೃತವಾಗಬೇಕು. ಈ ಪಾಜಕ ಪ್ರತಿಷ್ಠೆಯ ಪ್ರತಿಷ್ಠಾನವಾಗಬೇಕು, ಗೋಪಾಲ ಬಾಲನ ಊರಲ್ಲಿ ಅನಾಥಾಶ್ರಮ ತೆರೆಯಬೇಕು. ರಾಜಾಂಗಣಕ್ಕೆ ಹಾಸುಗಲ್ಲಿನಿಂದ ಶೋಭಿಸಬೇಕು. ಬಿಡುವಿಲ್ಲದ ಬೈರಾಗಿ ಹಮ್ಮಿಕೊಂಡ ಕಾರ್ಯಕ್ರಮಗಳು ಹತ್ತು ಹಲವು. ಅನನ್ಯ ಭಕ್ತಿಯಿಂದ ಪವಮಾನನನ್ನು ಪರಮಾತ್ಮನನ್ನು ಭಜಿಸುವ ಈ ಪರಿವ್ರಾಜಕನ ಕನಸುಗಳೆಲ್ಲಾ ಕ್ಷಣದಲ್ಲೇ ನನಸು.

ಗುರು ಮಧ್ವರಿಗೊಲಿದ ಮುದ್ದುಕೃಷ್ಣನ ಮುಟ್ಟಿ ಪೂಜೆಗೈಯುವುದೇ ಮಹಾ ಸುಯೋಗ. ಈ ಯೋಗಕ್ಕೆ ಪಾತ್ರರಾದ ಮಹಾಯೋಗಿಗಳ ಪರಂಪರೆ ಬೆಳೆಯಲಿ. ಉಡುಪಿಯ ಕೀರ್ತಿ ಬೆಳಗಲಿ.

**(ಉಪಾಯನ 'ತತ್ತ್ವವಾದ' ಪರ್ಯಾಯ ವಿಶೇಷಾಂಕ – ಜನವರಿ –ಫೆಬ್ರವರಿ, ೧೯೮೪. ಬೆಂಗಳೂರು.**

**ಸಂ. – ಭಾರತೀರಮಣಾಚಾರ್ಯ. ಪುತ್ತಿಗೆ ಮಠದ ಶ್ರೀ ಸುಧೀಂದ್ರತೀರ್ಥರನ್ನು ಕುರಿತು ಹೆಚ್ಚಿನ ಮಾಹಿತಿಗಾಗಿ ಈ ಗ್ರಂಥವನ್ನು ನೋಡಬಹುದು – ಶತಮಾನ ಕಂಡ, ಉಡುಪಿ ಪುತ್ತಿಗೆ ಮಠದ ಶ್ರೀ ಸುಧೀಂದ್ರತೀರ್ಥರು. ೧೯೯೩**

**ಲೇ – ಪ್ರೊ। ಎಂ. ರಾಜಗೋಪಾಲಾಚಾರ್ಯ, ಪ್ರಕಾಶಕರು – ಸುಗುಣಮಾಲಾ, ಪುತ್ತಿಗೆ ಮಠ, ಉಡುಪಿ.**

**ಸೋದೆಮಠದ ಶ್ರೀ ವಾದಿರಾಜರ ಕೃತಿಗಳನ್ನು ಮೈಸೂರು ವಿಶ್ವವಿದ್ಯಾನಿಲಯ ಪ್ರಕಟಿಸಿದೆ – ಶ್ರೀ ವಾದಿರಾಜರ ಕೃತಿಗಳು ೧೯೮೦ – ಸಂಪಾದಕರು – ಡಾ। ಟಿ. ಎನ್. ನಾಗರತ್ನ – ಸಂ.)**

●

೧ – ೪

# ಪೇಜಾವರ ಮಠದ ಕೈಫಿಯತ್ತು

ಕ್ಷಯ ಸಂವತ್ಸರದ ಜೇಷ್ಟ ಶು ೫ಲ್ಲು ಪೇಜಾವರಮಠದ ವಿಠ್ಠಲಭಟ್ಟನು ಬರೆಸಿದ ವಿವರ:

ನಮ್ಮ ಮೂಲಗುರು ಮದ್ವಾಚಾರ್ಯರು ಅವತಾರಮಾಡಿದ್ದು ಚತುಃಸಹಸ್ರೇ ತ್ರಿಶತೋತ್ತರೇ ಗತೇ ಸಂವತ್ಸರಾಣಾಂ ತು ಕತಾಪ್ರಥಿವ್ಯಾಂ॥ ಜಾತಃ ಪುನರ್ವಿಪ್ರತನುಃ ಸಭೀಮೋದೈತ್ಯೈರ್ನಿಗೂಢಂ ಹರಿತತ್ವ ಮಾಹ॥

ಶಾಲಿವಾಹನ ಶಕ ವರುಷ ೧೧೨೧ ಕಾಳಯುಕ್ತಿ ಸಂವತ್ಸರದ ಮಾಘ ಶುದ್ಧ ೭ ( [<೯]ಯಲ್ಲು ಮದ್ಯಗೇಹಬಟ್ಟರಲ್ಲಿ ಅವತಾರ ಮಾಡಿ, ೧೧೨೮ ಕ್ರೋಧನಸಂವತ್ಸರದ ಪುಷ್ಯ ಶು ೫ಲ್ಲು ಉಪನಿತ್ತ [>ನೀತ]ರಾಗಿ. ೧೧೩೦ನೆ ಪ್ರಭವ ಸಂವತ್ಸರದ ವೈಶಾಖ ಶು ೩ಲ್ಲು ಅಚ್ಯುತಪ್ರೇಕ್ಷಾಚಾರರಿಂದ ಯೆತಿಯಾಶ್ರಮವನ್ನು ಸ್ವೀಕರಿಸಿ, ೧೧೬೦ ಹೇವಳಂಬಿ ಸಂವತ್ಸರದ ಮಾಘ ಶು ೩ಲ್ಲು ಶ್ರೀಕೃಷ್ಣದೇವರ ಪ್ರತಿಷ್ಟೆಯನ್ನು ಮಾಡಿ, ಬದರಿಕಾಶ್ರಮದಿಂದ ತಂದ ವ್ಯಾಸಮೂರ್ತಿ ಸಾಲಿಗ್ರಾಮಗಳಲ್ಲಿ ಮದ್ಯತ್ತಳಾ ಮಠದಲ್ಲು ವೊಂದು ಮೂರ್ತಿಯನ್ನು ಪ್ರತಿಷ್ಟೆಮಾಡಿ, ಸುಬ್ರಹ್ಮಣ್ಯಕ್ಷೇತ್ರದಲ್ಲು ವೊಂದು ಮೂರ್ತಿಯನ್ನು ಪ್ರತಿಷ್ಟೆ ಮಾಡಿ, ಯೀ ಮೂರು ಸ್ಥಳದಲ್ಲು ಪ್ರಾತಃಕ್ಕಾಲಕ್ಕೆ ಕ್ರಮದಿಂದಲೆ ಸರ್ವದಾ ಪೂಜೆಗಳನ್ನು ಮಾಡುತ್ತ ಕೆಲವು ದಿವಸ ಯಿದ್ದರು. ಕ್ರಮದಿಂದ ಪೂಜೆಯನ್ನು ಮಾಡುವಾಗ್ಯೆ ಮದ್ಯತ್ತಳಮಠದಲ್ಲು ಮದ್ಯಾಹ್ನ ಪೂಜೆಯ ಘಟನೆ ಆದ್ದರಿಂದ, ಅದ್ಯಾಪಿ ಅಲ್ಲಿ ಮದ್ಯಾಹ್ನ ಪೂಜೆಯೆ ಸರಿ. ಯೀ ಉಭಯಸ್ಥಳದಲ್ಲು ತ್ರಿಕಾಲದಲ್ಲಿ ಪೂಜೆ ಅದೆ.

ಯೀ ಪ್ರಕಾರ ಆಚಾರ್ಯರು ಯಿದ್ದು ಆಮೇಲೆ ತಾವು ಬದರಿಕಾಶ್ರಮವನ್ನು ಹೊಗುವಾ ಪೇಕ್ಷಾವಂತರಾಗಿ ಶ್ರೀಕೃಷ್ಣದೇವರ ಪೂಜಾ ಸ್ವಮತಾಸ್ಥಾಪನಾರ್ಥವಾಗಿ ತಮ್ಮ ಅನುಜರಾದ ವಿಷ್ಣುತೀರ್ಥಾ ಚಾರ್‍ಯರು ಸಹವಾಗಿ ಅಷ್ಟಬ್ರಹ್ಮಚಾರಿಗಳು, ಗೋದಾವರಿತೀರಸ್ಥರಾದ ವಿವಿಧ ಸಂಸಾರಿಕ ದುಃಖದರುಶನೇನ ವಿರಕ್ತರಾದ ಸಜನೋದ್ಧಾರಕ ಶ್ರೀಮದಾಚಾರ್‍ಯ ಪಾದಶೇವಾಸನ್ಮಾರ್ಗವಸಂಭಾ [>ಸನ್ಮಾರ್ಗಾ ವಲಂಬಾ]ಪೇಕ್ಷೆಯಿಂದಾ ಗೋದಾವರಿ ತೀರದೆಶೆಯಿಂದ ಬಂದ ಶೋಭನಭಟ್ಟರಿಗೆ ಸಹಾ ೧೧೮೦ನೇ ಪಿಂಗಳ ಸಂವತ್ಸರದ ವೈಶಾಖ ಶು ೭ ಯಲ್ಲು ಕಣ್ವತೀರ್ಥಮಹಾಕ್ಷೇತ್ರದಲ್ಲು ಆಶ್ರಮ ಮಂತ್ರೋಪ ದೇಶವನ್ನು ಕೊಟ್ಟು, ರಜತಪೀಟಪುರಕ್ಕೆ ಕರತಂದು, ಸ್ವಮತಾದಿ ಸಕಲಸಭಾಸ್ರೊ

[>ಸಚ್ಛಾಸ್ತ್ರೋ]ಪದೇಶವನ್ನು ಮಾಡಿ ಯೀ ನವಯತೀಶ್ವರರಿಗು ತಮ್ಮ ಕರಪೂಜಿತಗಳಾದ ರಾಮದ್ವೈಯ್ಯ [>ದ್ವಯ], ಚತುರ್ಭುರ್ಜ[+ಜ]ಕಾಳಿಯ ಮರ್ಧನ, ದ್ವಿಭುಜ ಕಾಳಿಯ ಮಥನ, ವಿಟ್ಟಲತ್ರಯ, ಶ್ರೀಭೂವರಹಾ, ನೃಶಿಹ್ಮಮೂರ್ತಿಗಳನ್ನು ಕೊಟ್ಟು "ನೀವು ಯೆಂಟು ಮಂದಿ ಬಾಲಯೆತಿಗಳು ಪ್ರತ್ಯೇಕತ್ತಿರೆ ಯರಡು ವರುಷ ನಮ್ಮ ಆಜ್ಞಾನುಸಾರ ಸತಂತ್ರ ಸಾರೊತ್ತವಿಧಿಯಿಂದ ಪೂಜಾಧರ್ಮಗಳು ಶಾಸ್ತ್ರಪ್ರವಚನಗಳ ಮಾಡುತ್ತ ಯಿರಿ" ಯಂತ ಅಪ್ಪಣೆ ಕೊಟ್ಟು, ಪದ್ಮನಾಭತೀರ್ಥರಿಗೆ ಶ್ರೀರಾಮಪ್ರಥಮೆ ಯನ್ನು ಕೊಟ್ಟು, "ನೀಉ ಯೇತನ್ಮತ ಸ್ಥಾಪನೆ ಮಾಡಿಕೊಂಡು, ಸಕಲದೇಶಗಳಲ್ಲಿ ಸಂಚಾರಮಾಡುತ್ತಾ ಬಹುಮಂದಿ ಸಜ್ಜನರಿಗೆ ಸನ್ಮಾರ್ಗೋಪ ದೇಶದ್ವಾರ ಉಧರಿಸಿಕೊಂಡು, ದ್ರವ್ಯಾರ್ಜನೆ ಮಾಡಿಕೊಂಡು, ಶ್ರೀಕೃಷ್ಣಪೂಜೋಪಯುಕ್ತ ಶವ್ಯ [>ದ್ರವ್ಯ]ಸಹಾಯವನ್ನು ಮಾಡಿಕೊಂಡು ಯಿರಿ" ಯೆಂತಲು ಅಷ್ಟಯೆತಿಗಳಿಗೆ ಅಪ್ಪಣೆ ಕೊಟ್ಟು, ೧೨೦೦ನೆ ಯೀಶ್ವರ ಸಂವತ್ಸರದ ಮಾಘ ಶು ೯ಲ್ಲು ಬದರಿಕಾಶ್ರಮ ಪ್ರವೇಶವನ್ನು ಮಾಡಿ, ಶ್ರೀ ವೇದವ್ಯಾಸದೇವರ ಸನ್ನಿಧಿಯಲ್ಲು ಅದ್ಯಾಪಿತ ಸೇವಾಗತವಾಗಿ ಯಿದ್ದಾರೆ ಯಂತ ಅಹಿತಿಂಹ್ಯಾ. ಅವರ ಶಿಷ್ಯರು ಯೀ ಅಷ್ಟಯೆತೀಶ್ವರರ ನಾಮ ಹೇಳಲು

ವಂದೇ ಹೃಷ್ಟಿಕೇಶಮಿಯಾಂ ನೃಸಿಹಂ । ಜನಾರ್ಧನಂ ಚಿಂತಯತಿರುಪೇಂದ್ರಂ ॥
ಶ್ರೀ ವಾಮನಂ ಚ ಸ್ಮರ ವಿಷ್ಣು ನೇಮಿ ಶ್ರೀರಾಮಮಂ ಚೈವಮಧೋಕ್ಷಜಂಚ ।

ಘಟ್ಟದ ಮೇಲಿನವರು ಪದ್ಮನಾಭತೀರ್ಥರು ಯಿವರಿಗೆ ಆಚಾರ್ಯ ವಕ್ತಾ ಪ್ರಥುಮೆಗಳು... .........ಕಾಳಿಯಮಥನೌ ಸುವಿರತಾ ಸೂಕರಂ ನೃಸಿಹಂ ಚ ಅನ್ಯಂ ವಿಠಲಮಗಣಿತಮತಿ ಶಿಷ್ಯೇಃ ಪೂಜಿತಾನ್ಮಮಾಮಿ ಸದಾಯಿನ್ನು ಅಧೋಕ್ಷಜತೀರ್ಥಾಚಾರ್ಯರ ವಂಶಾವಳಿ। ವಂಶಸ್ಯಾದಿನ್ ಸನಕಾದಿನುಪಾಸ್ಯೇ ದೂರ್ವಾಸಂ ಪರತೀರ್ಥಾಖ್ಯ ಭಿಕ್ಷುಂ ಸತ್ಯಪ್ರಜ್ಞಪ್ರಾಜ್ಞ ತೀರ್ಥಕ್ರಮತಿವಿಕ್ಷ್ಯ ವಂದೇ ಅಚ್ಯುತಪ್ರೇಕ್ಷ ಮಧ್ವಾ ವಂಶಿದೋಕ್ಷಜ ತೀರ್ಥಮೇಮಿ ಕಮಲಾಕ್ಷಂ ಪುಷ್ಕರಾಕ್ಷಂ ಸದಾ॥ ಸಾಷ್ಟಾಂಗ ಪ್ರಣಮೇಮರೇಂದ್ರ, ವಿಜಯೌ ಸೇವೇ ಮಹೀಂದ್ರಂ ಮುಹುಃ। ಸಂಸೇವೆ ವಿಜಯಧ್ವಜೋತ್ತಮ ಪರಿವ್ರಾಜಂ ಚ ಚಿಂತಾಮಣಿಂ। ಶ್ರೀ ದಾಮೋದರ ವಾಸುದೇವ ಮುನಿಪಾಯೋಗಿಂದ್ರ ಕರ್ಮಂದಿನಂ। ವಂದೇಹಂ ನನು ವೇದಗರ್ಭ ಮಜಣಿ ಪ್ರಜ್ಞತೀರ್ಥಂ ಮುದಾ॥ ವಿಶ್ವಪ್ರಜ್ಞಮನಾರತಂ ಯತಿವರಂ। ವಿಶ್ವೇಶ್ವರಂ ಸೌಮ್ಯಹಂ ಪಾದಾಬ್ಜೇಭುಜ ವಿಶ್ವಭೂಷಣಮುನೇ ಶ್ರೀ ವಿಶ್ವವಂದ್ಯಂ ಪುನಃ। ವಿದ್ಯಾರಾಜಮುನೀಂದ್ರ ದೇಮಿಶರಣಂ ಶ್ರೀ ವಿಶ್ವಮೂರ್ತಿಂ ಭಜೇ॥ ವಿಶ್ವಜ್ಯಶಾಸ್ತ್ರಂ ನಿರತಂ। ವಿಶ್ವರಕ್ಷೈಕ ದೀಕ್ಷಿತನ್। ವಿಶ್ವಪತ್ಯ ಬಿದಾಖ್ಯಾರ್ತ। ಶಶ್ವನೌಮಿಗುರೂ ಮಮ॥ ಮಂತ್ರಾ ಯಂತ್ರೇಷ್ಟು ಕುಶಲಾನ್ ಸರ್ವ ಶಾಸ್ತ್ರೀರು ನಿಷ್ಣೀತನ್ ಶ್ರೀವಿಶ್ವನಿಧಿಯೊನಿಂದ್ರನ್ ದಯಾಳು ನೌಮಿ ಸರ್ವದಾ। ವಿರಕ್ತಿಜ್ಞಾನ ಭಕ್ತ್ಯಾದಿ ವಿಶುದ್ಧ ಗುಣಮಂಡಿತನ್ ಭಕ್ತ್ಯಾನಶನ। ವಿಶ್ವಾದಿ ಶಾಖ್ಯ ಯೋಗೀಂದ್ರಾ। ಸದಾವ್ಯಾಖ್ಯಾನ ತತ್ಪರಾನ್। ವೈರಾಗ್ಯ ಭಕ್ತ್ಯನಶನ। ಕೃಛ್ರನೃತ ಸಮನ್ವಿತಾನ್ ವಿಶ್ವಾದಿ ರಾಜಯೋಗಿಂದ್ರಾನ್। ಸದಾವಿಠಲ ಪೂಜಿತಾನ್। ಬ್ರಹ್ಮರಾಕ್ಷಸ ಭೂತಾದಿ।ನಾ ಉಚ್ಚಲನ ವಿಚಕ್ಷಣಾನ್। ವಿಶ್ವಬೋಧ ಗ್ಯೂದೂನಾ। ವಂದೇ ದಿಗಂತಖ್ಯಾತ ವಿಕ್ರಮಾನ್॥ ಜಿತೇಂದ್ರಿಯಾನ್ ಜಿತಕ್ರೋಧಾನ್ ಬಹುದಾನರತನ್ ಪರಾನ್। ವಿಶ್ವವಲ್ಲಭಯಾನಿಂದ್ರ। ನಾವಂದೇಹಂಬುಧಿ ಶುದಯೇ॥

ನಮ್ಮಾ ಅಧೋಕ್ಷಜತೀರ್ಥಾಚಾರ್ಯ್ಯರು ಶ್ರೀಮದಾಚಾರ್ಯ್ಯರಿಂದ ದತ್ತವಾದ। ದ್ವಿಜ ಶ್ರೀವಿದ್ಯಾವಿಠಲದೇವರ ಪೂಜಾಕ್ರಮುಪ್ರಾಪ್ತವಾದ ಶ್ರೀ ಕೃಷ್ಣದೇವರ ಪೂಜಾಧರ್ಮ ಸಹಾ ಮಾಡಿಕ್ಕೊಂಡು, ಸಕಲಸಂಶಾಸ್ತ್ರಪ್ರವಚನೆಯನ್ನು ಮಾಡುತ್ತಾ ಮಹಾತಪೋನಿಷ್ಟರಾಗಿ. ಸಕಲ ಭಾಗೆದತ್ಯಾದಿ

ತೀರ್ಥಯಾತ್ರೆಗಳನ್ನು ಮಾಡಿಕ್ಕೊಂಡು, ಮುಂದೆ ಸಂಸ್ಥಾನಕ್ಕೆ ಕಮಲಾಕ್ಷತೀರ್ಥರಿಗೆ ಆಶ್ರಮವನ್ನು ಕೊಟ್ಟು ತಾಉ ಸೇತುಯಾತ್ರೆ ನಿಮಿತ್ತ್ಯ ತೆರಳಿಹೋದ ವರುಷ ೧೨೩೫ನೆ ಪರಿಧಾವಿ ಸಂವತ್ಸರ ಮಾಘ ಶು॥ ೭ ಯಲ್ಲು ಧನುಷ್ಕೋಟಿಯಲು ಸಿದ್ಧಿವಂತರಾದರು.

ಕಮಲಾಕ್ಷತೀರ್ಥರು ಸಕಲಶಾಸ್ತ್ರನಿರತರಾಗಿ ತೀರ್ಥಯಾತ್ರೆ ನಿಮಿತ್ತ ಭಾಗೀರತಿಗೆ ಹೋಗಿ ಪ್ರಮೊದೂತ ಸಂವತ್ಸರ ಕಾರ್ತೀಕ ಶುದ್ಧ॥ ೫ಲ್ಲು ಭಾಗೀರತಿಯಲ್ಲು ಶ್ರೀಹರಿಪಾದವನ್ನು ಯೆಯಿದಿದರು.

ಅರಶಿಪುರು ಪುಷ್ಕವಾಕ್ಷತೀರ್ಥರು ಮಹಾತಪಸ್ವಿಗಳು ಭೂಪ್ರದಕ್ಷಿಣಾರ್ಥವಾಗಿ ತೆರಳಿಹೋದವರು ನಂದನ ಸಂವತ್ಸರದ ಪುಷ್ಯ ಶು ೧ಲ್ಲು ದ್ವಾದಸಿಯಲ್ಲು ಪಾವನವಾದರು.

ಅವರ ಕರಕಮಲಸಂಜಾತರು ಅಮರೇಂದ್ರತೀರ್ಥರು ಮಹಾಪಂಡಿತರು. ಬಹುತರ ವ್ಯಾಖ್ಯಾನ ಹೇಳಿ ವಿಜಯತೀರ್ಥರಿಗೆ ಸಂಸ್ಥಾನ ವಪಶಿ ಮೂಲಕಾವೇರಿಯ ರಾಕ್ಷಸ ಸಂವತ್ಸರ ಪಾಲ್ಗುಣ ಶು ಲ್ಲು ಹರಿಪಾದ ಶೇರಿದರು.

ವಿಜಯತೀರ್ಥರು ತೀರ್ಥಯಾತ್ರಾಪರರು. ಯೀಶ್ವರ ಸಂವತ್ಸರ ಜೇಷ್ವ, ಬಹುಳ ದಸಿಮಿಯಲ್ಲು ಉೃಂದಾವನ ಕ್ಷೇತ್ರದಲ್ಲು ದೇಹತ್ಯಾಗವನ್ನು ಮಾಡಿದರು.

ಅವರ ಶಿಷ್ಯರು ಮಹೇಂದ್ರತೀರ್ಥರು ಮಹಾವಿರಕ್ತವಂತರಾಗಿ ಅನಶನಾದಿ ವೃತಪರರಾಗಿ ಬಹುತಿರ್ಥಯಾತ್ರೆಗಳ ಮಾಡಿ ಗೋದಾವರಿ ತೀರ ನಿವೃತಿ ಸಂಗಮದಲು ಹರಿಪಾದವನ್ನು ಸೇರಿದರು.

ಅವರ ಕರಕಮಲಸಂಜಾತರಾದ ಮಹಾಪಂಡಿತರಾದ ವಿಜಯಧ್ವಜ ಆಚಾರ್ಯರು ಮಹಾಹರಿಭಕ್ತಿಯಿಂದ ಪೂರ್ನರಾಗಿ ಶ್ರಿಮನ್ ಮಹಾಭಾಗವತಕ್ಕೆ ಶ್ರೀಹರಿಗುರುಗಳ ಆಜ್ಞಾನುಸಾರವಾಗಿ ವ್ಯಾಖ್ಯಾನವನ್ನು ಮಾಡುತ್ತ, ಭೂಪ್ರದಕ್ಷಿಣೆಯನ್ನು ದ್ವಿವಾದ ಮಾಡಿದ ಶ್ರೀ ಮನ್ಮಹಾಭಾಗವತ ವ್ಯಾಖ್ಯಾನವನ್ನು ಶ್ರೀಕೃಷ್ಣ ಸನ್ನಿಧಿಯಲ್ಲು ಸಮರ್ಪಣೆಮಾಡಿ, ಕಣ್ವತೀರ್ಥಮಹಾಕ್ಷೇತ್ರದಲ್ಲಿ ೧೩೪೮ನೆ ಪರಾಭವ ಸಂವತ್ಸರದ ವೈಶಾಖ ಶು ೧೨ಯಲ್ಲು ವೈಕುಂಠಯಾತ್ರೆಯನ್ನು ಮಾಡಿದರು.

ಅವರ ಶಿಷ್ಯರು ಚಿಂತಾಮಣಿತೀರ್ಥರು ಮಹಾತಪೋನಿಷ್ಟರಾಗಿ ಹರಿ ಆರಾಧನೆಯನ್ನು ಮಾಡುತ್ತಾ ರಉದ್ರಿ ಸಂವತ್ಸರ ಜೇಷ್ಟ ಶು॥ ೫ಲ್ಲು ಕಣ್ವತೀರ್ಥಕ್ಷೇತ್ರದಲ್ಲು ದೇವರ ಯಾತ್ರೆಯನ್ನು ಮಾಡಿದರು.

ಅವರ ಕರಕಮಲಸಂಜಾತರು ದಾಮೋದರತೀರ್ಥರು ಬಹುತರ ವ್ಯಾಖ್ಯಾನ ಹೇಳಿಕ್ಕೊಂಡು, ಬಹು ಹರಿಭಕ್ತರ ಸಾದುಗುಣವಿಶಿಷ್ಟವನ್ನು ಮಾಡಿ ಉಡುಪಿಯಲ್ಲು ಹೇವಳಂಬಿ ಸಂವತ್ಸರ ಭಾದ್ರಪದ ಬಹುಳ ೧೫ಲ್ಲು ದೇಹತ್ಯಾಗವನ್ನು ಮಾಡಿದರು.

ಅವರ ಶಿಷ್ಯರು ವಾಸುದೇವತೀರ್ಥರು ಭಾಗೀರತಿಯಾತ್ರಾ ಪ್ರಯುಕ್ತ ಹೋದವರು ರಾಕ್ಷಸ ಸಂವತ್ಸರದ ಕಾರ್ತೀಕ ಶು ೧೫ ಯಲ್ಲು ಭಾಗೀರತಿಯಲ್ಲು ದೇಹತ್ಯಾಗವನ್ನು ಮಾಡಿದರು.

ಅವರ ಕರಕಮಲಸಂಜಾತರು ಯೋಗೇಂದ್ರತೀರ್ಥರು ಬಹುತಪೋನಿಷ್ಟರಾಗಿ ಮೂಲ ಕಾವೇರಿಯಲ್ಲು ದುಂದುಭಿ ಸಂವತ್ಸರ ಪುಷ್ಯ ಶು ೧೦ಯಲ್ಲು ವೈಕುಂಠಯಾತ್ರೆಗೆ ತೆರಳಿದರು.

ಅವರ ಶಿಷ್ಯರು ವೇದಗರ್ಭತೀರ್ಥರು ಮಹಾಕೀರ್ತಿವಂತರಾಗಿ ಸ್ವಮತೋದ್ಧಾರಕ್ಕಾಗಿ ಯಾತ್ರಾನಿಮಿತ್ತವಾಗಿ ತೆರಳಿಹೋದವರು ಉೃಂದಾವನಕ್ಷೇತ್ರದಲ್ಲು ಯುವ ಸಂವತ್ಸರ ಆಶ್ವೀಜ ಶು ೧೫ಲ್ಲು ದೇವರ ಯಾತ್ರೆಯನ್ನು ಮಾಡಿದರು.

ಅವರ ಕರಕಮಲಸಂಜಾತರು ಅಣುಪ್ರಜ್ಞತೀರ್ಥರು ಮಹಾತಪೋನಿಷ್ಟರಾಗಿ ಮಹಾಶಾಪಾನುಗ್ರಹಉಳ್ಳವರಾಗಿ ಜಗನ್ನಾಥದಲ್ಲು ವಿಕೃತಿ ಸಂವತ್ಸರ ಜೇಷ್ಟ ಬಹುಳ ೫ಯಲ್ಲು ಸಿದ್ಧಿವಂತರಾದರು.

ಅವರ ಶಿಷ್ಯರಾದ ವಿಶ್ವಪ್ರಜ್ಞತೀರ್ಥರು ಮಹಾಪಂಡಿತರಾಗಿ ಹರಿಭಕ್ತರನ್ನು ಉದ್ಧರಿಸಿ ಗೋದಾ

ತೀರ ನಾಸಿಕಾ ತ್ರಿಯಂಬಕದಲ್ಲು ಪ್ಲವಂಗ ಸಂವತ್ಸರದ ಶ್ರಾವಣ ಬ ೭ಯಲ್ಲು ದೇವರ ಯಾತ್ರೆಯನ್ನು ಮಾಡಿದರು.

ಅವರ ಕರಕಮಲಸಂಜಾತರಾದ ವಿಶ್ವೇಶ್ವರತೀರ್ಥರು ಮಹಾಯಾತ್ರೆ ಮೊದಲಾದ ಯಾತ್ರೆಗಳನ್ನು ಮಾಡಿದರು. ಪ್ರೊಷ್ಟಿಯಲ್ಲು ದುಂದುಭಿ ಸಂವತ್ಸರ ಜೇಷ್ಟ ಬಹುಳ ೯ಲ್ಲು ದೇಹತ್ಯಾಗವನ್ನು ಮಾಡಿದರು.

ಅವರ ಶಿಷ್ಯರು ಮಹಾತಪೋನಿಷ್ಟರಾದ ವಿದ್ವ[>ಶ್ವ]ಭೂಷಣತೀರ್ಥರು ತಮ್ಮಾ ಪಾದಶೇವಕರಿಗೆ ಬ್ರಹ್ಮರಾಕ್ಷಸಾದಿ ಸಕಲಭೂತಪಿಶಾಚಾದಿಗಳನ್ನು ನಿವೃತ್ತಿಮಾಡುತ್ತಾ ಪ್ರಮಾದಿ ಸಂವತ್ಸರ ಕಾರ್ತೀಕ ಬಹುಳ ೫ಲ್ಲು ಕಾವೇರಿ ತೀರ ರಾಮನಾಥಪುರದಲ್ಲು ದೇವರ ಯಾತ್ರೆ ಮಾಡಿದರು.

ಅವರ ಕರಕಮಲಸಂಜಾತರು ವಿಶ್ವವಂದ್ಯತೀರ್ಥರು ಆಗಾ ದೇವರ ಯಾತ್ರೆ ಮಾಡಿದರು.

ಅವರ ಕರಕಮಲ ಸಂಜಾತರಾದ ವಿಶ್ವವಂದ್ಯತೀರ್ಥರು ಅಗಾಧಬೋಧವಿಶಿಷ್ಟರಾಗಿ ಮಹಾ ವಾಖ್ಯಾನಗಳನ್ನು ಹೇಳುತ್ತ, ಶುಭಕೃತು ಸಂವತ್ಸರ ಮಾಘ ಶು ೧೪ಲ್ಲು ತುಂಗಭದ್ರಾಸಂಗಮ ಕೂಡಲಕ್ಷೇತ್ರದಲ್ಲು ಹರಿಪಾದವನ್ನು ಸೇರಿದರು.

ಅವರ ಶಿಷ್ಯರು ವಿದ್ಯಾರಾಜತೀರ್ಥರು ಸ್ವೆತು [>ಸೇತು] ಯಾತ್ರಾ ನಿಮಿತ್ತವಾಗಿ ಹೋಗಿ ವಿಭವ ಸಂವತ್ಸರದ ಫಾಲ್ಗುಣ ಶು ೫ಲ್ಲು ಕಾವೇರಿ ತೀರ ಹಿರೆ ಶ್ರೀರಂಗದಲ್ಲು ದೇವರ ಯಾತ್ರೆಯನ್ನು ಮಾಡಿದರು.

ಅವರ ಶಿಷ್ಯರು ವಿಶ್ವಮೂರ್ತಿತೀರ್ಥರು ಮಹಾತಪೋನಿಷ್ಟರಾಗಿ ಬಹುತ್ತರ ವ್ಯಾಖ್ಯಾನಗಳು ಹೇಳಿಕೊಂಡು ವಿಳಂಬಿ ಸಂವತ್ಸರ ಪುಷ್ಯ ಶು॥ ೧೨ಯಲ್ಲು ಪೇಜಾವರ ಮಠದಲ್ಲು ಹರಿಪದವನ್ನು ಹೊಂದಿದರು.

ಅವರ ಶಿಷ್ಯರು ವಿಶ್ವಪತಿತೀರ್ಥರು ಮಹಾಜ್ಞಾನವಿಶೇಷರಾಗಿ ಸ್ವಮತಪ್ರತಿಪಾದಕಗಳಾದ ಗ್ರಂಥಗಳಿಗೆ ವ್ಯಾಖ್ಯಾನಗಳನ್ನು ಮಾಡುತ್ತಾ ಭಾಗೀರತಿ ಯಾತ್ರೆಯನ್ನು ಮಾಡಿ, ನಳ ಸಂವತ್ಸರ ವೈಶಾಖ ಶು ೨ಲ್ಲು ವೈಕುಂಠ ಯಾತ್ರೆಯನ್ನು ಮಾಡಿದರು.

ಅವರ ಶಿಷ್ಯರು ವಿಶ್ವನಿಧಿತೀರ್ಥರು ಮಹಾವಿರಕ್ತವಂತರಾಗಿ ಮಹಾತಪೋನಿಷ್ಟರಾಗಿ ಪೇಜಾವರದಲ್ಲು ವಿಭವಸಂವತ್ಸರ ಪಾಲ್ಗುಣ ಶು ೭ಯಲ್ಲು ದೇವರ ಯಾತ್ರೆಯನ್ನು ಮಾಡಿದರು.

ಅವರ ಶಿಷ್ಯರು ವಿಶ್ವಾಧೀಶತೀರ್ಥರು ಬಹುಶಾಸ್ತ್ರಗ್ನಾನರಾಗಿ ಬಹು ವ್ಯಾಖ್ಯಾನಗಳನ್ನು ಹೇಳುತ್ತ, ಶ್ರೀ ಕೃಷ್ಣಸನ್ನಿಧಿಯಲ್ಲು ವಿಳಂಬ ಸಂವತ್ಸರ ಕಾರ್ತೀಕ ಶುದ್ಧ ೧೦ಲ್ಲು ಉಡುಪಿಯಲ್ಲು ಹರಿಪಾದವನ್ನು ಯ್ಯೆಯಿದರು.

ಅವರ ಶಿಷ್ಯರಾದ ವಿಶ್ವಾಧಿರಾಜತೀರ್ಥರು ಬಹುತಪವನ್ನು ಮಾಡಿ ಅನಶನಾದಿ ವ್ರತಪರರಾಗಿ ಭಾವ ಸಂವತ್ಸರ ಜೇಷ್ಟ ಶು ೨ಲ್ಲು ಉಡುಪಿಯಲ್ಲು ದೇವರ ಯಾತ್ರೆ ಮಾಡಿದರು.

ಅವರ ಶಿಷ್ಯರಾದ ವಿಶ್ವಬೋದತೀರ್ಥರು ಬಹುನೂಶಾ[+ಪಾ]ನುಗ್ರಹ ವಿಶೇಷದಿಂದ ಮಹಾಖ್ಯಾತಿವಂತರಾಗಿ ಸ್ವಭಕ್ತರನ್ನು ಉದ್ಧಾರಮಾಡುತ್ತ ಪೇಜಾವರದಲ್ಲು ವಿಕಾರಿ ಸಂವತ್ಸರ ಆಷಾಢ ಬ ೪ಲ್ಲು ಹರಿಪದವನ್ನು ಯ್ಯೆದಿದರು.

ಅವರ ಶಿಷ್ಯರು ವಿಶ್ವವಲ್ಲಭತೀರ್ಥರು ಬಹುದಾನಶೀಲರು ಭಾಗೀರತ್ಯಾದಿಯಾತ್ರೆಗಳನ್ನು ದ್ವಿವಾರ ಮಾಡಿ ಲಗಾಳಬೊರ ವಿಶಿಷ್ಟರಾಗಿ ನರಸಿಂಹಕ್ಷೇತ್ರದಲ್ಲು ಶ್ರೀಪಾದರಾಯರ ಉ್ಯಂದಾವನ ಸನ್ನಿಧಿಯ ರಕ್ತಾಕ್ಷಿಸಂವತ್ಸರದ ಪಾಲ್ಗುಣ ಬಹುಳ ಚತುರ್ದಶಿಯಲ್ಲು ವೈಕುಂಠಯಾತ್ರೆಯನ್ನು ಮಾಡಿದರು. ಯೀ ಪ್ರಕಾರ ಶ್ರೀಮನ್ಮಾಧ್ವಾಚಾರಿಯರ ಶಿಷ್ಯರಾದ ಯೇತದ್ವ್ಯತೀರ್ಥರು ಅನೇಕ ತುರ್ಯ್ಯಾಶ್ರಮಗಳು, ಅನೇಕ ಗೃಹಸ್ತಾಶ್ರಮಗಳಲ್ಲು ವಿಶೇಷವಾಗಿ ಪರಮಾನುಗ್ರಹಪಾತ್ರರಾದ ಲಿಕು... ಚಕುಲೋತ್ಪನ್ನರಾದ ಶ್ರೀ ವಿಕ್ರಮಪಂಡಿತಾಚಾರ್ಯರು ತತ್ಪುತ್ರ ನಾರಾಯಣಪಂಡಿತಾಚಾರ್ಯರು. ಶಂಕ್ರಾ್ರಚಾರ್ಯರೆಂಬ

ಪೇಜಾವರ ಮಠದ ಕೈಫಿಯತ್ತು

ಮೂರು ಮಂದಿ ಸನ್ಮತ ಪ್ರತಿಷ್ಠಾಪನರ ತತ್ವಪ್ರದೀಪಿಕಾದಿ ಬಹುಗ್ರಂಥಗಳಿಗೆ ಮದ್ವವಿಜಯಾದಿ ಅನೇಕ ಕಾವ್ಯಗಳಿಗೆ ಸಹಾ ಕರ್ತ್ತರುಗಳಾದ ಮಹಾಪಂಡಿತಾಚಾರ್ಯರಿಂದ ಕೂಡಿಕೊಂಡು ಗುರ್ವಾಜ್ಞಾನು ಸಾರದಿಂದ ತನ್ಮತ ಸ್ಥಾಪನೆಯನ್ನು ಮಾಡಿಕೊಂಡು, ತ್ತದುಪದಿಷ್ಟ ಜ್ಞಾನದಿಂದ ಶ್ರೀಭಗವದುಪಾಸನೆಯನ್ನು ಮಾಡಿಕ್ಕೊಂಡು, ಸ್ವಶಿಷ್ಯರಲ್ಲಿ ಸತ್ಸಂಪ್ರದಾಯ ಪ್ರವರ್ತನೆಯನ್ನು ಮಾಡುವಂತಾ ಯಿ ಅಷ್ಟಯೆತೀಶ್ವರರ ಮದ್ಯದಲ್ಲಿ ಅಧೋಕ್ಷಜತೀರ್ಥಾಚಾರ್ಯರ ವಂಶಾವಳಿ: ಯಸ್ಮಸ್ವಾಗ್ವಜಾಧಾರಾ ದುರಿತ ಕುಲಮಹಾಕೂಲದಾಹೇತಿ ಶೂರಾ ದಂಡ ಪ್ರೊದ್ಬಸಿಹಸ್ತಃ ಸ್ಫುರದಸಿಸಮಸನ್ಮಾರ್ಗ ಹಸ್ತಾಃ ಸಮಸ್ತಾಹಃ ಶ್ರೀಕೃಷ್ಣ ಸ್ನೇಹಪಾಶಾ:ಶ್ರಮುರರಗತಯಃ ಶಾಂತಿ ಖಾಜೋ ವಿರಕ್ತಾಃ ಯೋಗಿಂದ್ರಾಹಶ್ಚಿತ್ರಾ ಲೋಕಾಧಿಪನಿಭವಿಭವಾ ಮದ್ವದಾಸಾಜಯಂತೇ॥

**ಪೇಜಾವರ ಮಠದಲ್ಲಿ ಯಿರುವ ಪುಸ್ತಕಗಳ ವಿವರ :**

| | |
|---|---|
| ಗೀತಾಭಾಷ್ಯದ ಪುಸ್ತುಕ | ೧ |
| ಭಾಷ್ಯದ ಪುಸ್ತುಕ | ೧ |
| ಅಣ್ಣುಭಾಷ್ಯದ ಪುಸ್ತುಕ | ೧ |
| ಅಣ್ಣು ವ್ಯಾಖ್ಯಾನದ ಪುಸ್ತುಕ | ೧ |
| ತತ್ವದ್ಯುತ್ತರ ಪುಸ್ತುಕ | ೧ |
| ಉದರ ಟ್ಟಿ ಕುಮೆ | ೧ |
| ಕರ್ಮನಿನರ್ಯ್ನದ ಪುಸ್ತುಕ | ೧ |
| ವಿಷ್ಣುತತ್ವನಿರ್ನಯದ ಪುಸ್ತುಕ | ೧ |
| ತದೋಪನಿಷದ್ಭಾಷ್ಯದ ಪುಸ್ತುಕ | ೧ |
| ಗೀತಾತಾತ್ಪರ್ಯದ ಪುಸ್ತುಕ | ೧ |
| ಗೀತಾಪುಸ್ತುಕ | ೧ |
| ಪ್ರಮಾಣ ಲಕ್ಷಣದ ಪುಸ್ತುಕ | ೧ |
| ಉಪಾದಿಖಂಡದ ಪುಸ್ತುಕ | ೧ |
| ಮಾಯಾವಾದಖಂಡನದ ಪುಸ್ತುಕ | ೧ |
| ಪ್ರಪಂಚಮಿತ್ಯಾತ್ವಾಣುಮಾನಖಂಡನದ ಪುಸ್ತಕ | ೧ |
| ತತ್ವಸಂಖ್ಯಾನ ತತ್ವವಿವೇಕದಾ ಪುಸ್ತುಕದ ಹಾಯಿ | ೧ |
| ನ್ಯಾಯವಿಯರ್ತಿ ಪುಸ್ತುಕ | ೧ |
| ಪಂಚಸ್ತುತಿ ಪುಸ್ತುಕ | ೧ |
| ಕೃಷ್ಣಾಮೃತಮಹಾರ್ಣವದ ಪುಸ್ತುಕ | ೧ |
| ತಂತ್ರಸಾರದ ಪುಸ್ತುಕ | ೧ |
| ಶ್ರೀಮನ್ಮಹಾಭಾಗವತದ ಪುಸ್ತುಕ | ೧ |
| ಭಾಗವತ ತಾತ್ಪರ್ಯ ಪುಸ್ತುಕ | ೧ |
| ಮಹಾಭಾಗವತ ತಾತ್ಪರ್ಯ ನಿರ್ಣಯದ ಪುಸ್ತುಕ | ೧ |
| ಯಿದರಲ್ಲಿ ಕಾವರದ ರಾಜಯ ಪುಸ್ತುಕ | ೧ |
| ದ್ವಾದಶಸ್ತ್ರೋಸ್ತುರುಗ್ಮಿಣೇಶವಿಜಸಹಾ ಪುಸ್ತುಕ | ೧ |

| | |
|---|---|
| ತತ್ವಪ್ರಕಾಸಿಕ ಪುಸ್ತುಕ | ೧ |
| ಯಿದರ ಟೀಕಾ ರಾಘವೇಂದ್ರಯ್ಯ ಪುಸ್ತುಕ | ೧ |
| ಚಂದ್ರಿಕಾ ಪುಸ್ತುಕ | ೧ |
| ಭಾಗವತ ಪುಸ್ತುಕ | ೧ |
| ಶ್ರೀಮನ್ಮಹಾಭಾರತದ ಶಲ್ಯಪರ್ವದ ಪುಸ್ತುಕ | ೧ |
| ಆದಿಪರ್ವ ಅರಣ್ಯಪರ್ವದ ಪುಸ್ತುಕ | ೧ |
| ಕರ್ನಪರ್ವದ ಪುಸ್ತುಕ | ೧ |
| ವಿರಾಟಪರ್ವದ ಪುಸ್ತುಕ | ೧ |
| ಸಂಭವಪರ್ವದ ಪುಸ್ತುಕ | ೧ |
| ಮಧ್ವಜಯದ ಪುಸ್ತುಕ | ೧ |
| ಯಿದರ ಟೀಕಾ ವಿಶ್ವಪತಿ ಪುಸ್ತುಕ | ೧ |
| ಪಂಚನೀತಿವ್ಯಾಖ್ಯಾನದ ಪುಸ್ತುಕ | ೧ |
| ಪ್ರಕ್ರಿಯಕಉಮದಿ ಪುಸ್ತುಕ | ೧ |
| ಮದ್ವಸಿದ್ಧಾಂತ ಪುಸ್ತುಕ | ೧ |
| ಕವುಮದಿ ಪುಸ್ತುಕ | ೧ |
| ಸುಧಾ ಪುಸ್ತುಕ | ೧ |
| ಯಿದರ ಟೀಕಾ ಪುಸ್ತುಕ | ೧ |
| ವೇದದ ಪುಸ್ತುಕ | ೧ |
| ಸಾಕ್ತಬಾಗದ ಪುಸ್ತುಕ | ೧ |
| ತರ್ಕಸಂಗ್ರಹಾ ಅನ್ನಭಟ್ಟಿಯ ಮುಕ್ತಾವಳಿ ಸಹಾ ಪುಸ್ತುಕ | ೧ |
| ಮಣಿಮಂಜರಿ ಅದರ ಟೀಕಾ ಸಹಾ ಪುಸುಕ್ತ | ೧ |
| ಶ್ರೀಮದ್ರಾಮಾಯಣ ಪುಸ್ತುಕ | ೧ |
| ಪರಿಭಾಷಾ ಪುಸ್ತುಕ | ೧ |
| ಕಾರಿಕಾವಳಿ ಪುಸ್ತುಕ | ೧ |
| ಸಿತಿಕಂಟ ಪುಸ್ತುಕ | ೧ |
| **ಅಂತು ಪುಸ್ತುಕ** | ೫೩ |

(ಉಡುಪಿಯ ಇತರ ಮಠಗಳ ಕೈಫಿಯತ್ತುಗಳು ಡಾ। ಎಂ. ಎಂ. ಕಲ್ಬುರ್ಗಿಯವರು ಸಂಪಾದಿಸಿರುವ 'ಕರ್ನಾಟಕದ ಕೈಫಿಯತ್ತುಗಳು' (೧೯೯೪) ಗ್ರಂಥದಲ್ಲಿ ಲಭ್ಯವಿವೆ. ಈ ಕೈಫಿಯತ್ತುಗಳನ್ನು ಸಂಗ್ರಹಿಸಿದವರು ಕರ್ನಲ್ ಮೆಕೆಂಝಿ (೧೭೫೪ – ೧೮೨೧) – ಸಂ.)

ಬನ್ನಂಜೆ ಗೋವಿಂದಾಚಾರ್ಯ

೧-೫

# ಪೇಜಾವರ ಮಠದ ಗುರು ಪರಂಪರೆ

## ಒಂದು ಹೊಸ ಬೆಳಕು

**ಸು**ಮಾರು ೨೦೦-೨೫೦ ವರ್ಷಗಳಷ್ಟು ಪ್ರಾಚೀನವಾದ ಒಂದು ತಾಡವಾಲೆ ಗ್ರಂಥವು ಪೇಜಾವರ ಮಠದ ಸಂಗ್ರಹದಲ್ಲಿದೆ (ಎಂ.ಎಸ್. ೧೯೦). ಕೆಲವು ಅಪೂರ್ವ ಮಾಹಿತಿಗಳನ್ನು ಇದು ಒಳಗೊಂಡಿದೆ. ಅತ್ಯಂತ ಮಹತ್ತ್ವದ ಒಂದು ಸಂಗತಿಯೆಂದರೆ – ಈಗ ಬಳಕೆಯಲ್ಲಿರುವುದಕ್ಕಿಂತ ತುಸು ಭಿನ್ನವಾದ ಗುರುಪರಂಪರೆಯನ್ನು ಇದು ದಾಖಲೆ ಮಾಡಿದೆ. ಪ್ರಾಚೀನ ಸಂಪ್ರದಾಯವನ್ನನುಸರಿಸಿ ಈ 'ಗುರು ಪರಂಪರಾಶ್ಲೋಕ' ನಿರ್ಮಿತವಾಗಿರುವುದರಿಂದ ಈಗ ಬಳಕೆಯಲ್ಲಿರುವ ಮಠೀಯ ಪದ್ಧತಿಗಿಂತ ಇದು ಹೆಚ್ಚು ಮೌಲಿಕವಾಗುತ್ತದೆ; ಹೆಚ್ಚು ಅಧಿಕೃತವಾಗುತ್ತದೆ.

ಸಂಶೋಧಕರ ದೃಷ್ಟಿಯಿಂದಲಂತೂ ಎರಡು ಶತಮಾನಗಳಿಗಿಂತಲೂ ಪ್ರಾಚೀನವಾದ ಈ ದಾಖಲೆಗೆ ಅನನ್ಯವಾದ ಮಹತ್ತ್ವವಿದೆ. ಪೇಜಾವರ ಮಠದ ಗುರುಪರಂಪರೆಯ ಬಗ್ಗೆ ಹೊಸತಾಗಿ ಸಂಶೋಧನೆ ನಡೆಸಿ, ಅದನ್ನು ಪುನಾರಚಿಸುವ ಆವಶ್ಯಕತೆಯನ್ನು ಈ 'ಪರಂಪರಾಶ್ಲೋಕ' ಸಮರ್ಥಿಸುತ್ತದೆ. ಈ ಶ್ಲೋಕ ಮಾಲಿಕೆಯಲ್ಲಿ ಮುಖ್ಯವಾಗಿ ಗಮನಿಸಬೇಕಾದ ಮೂರು ಬದಲಾವಣೆಗಳಿವೆ.

(೧) ಈಗ ಬಳಕೆಯಲ್ಲಿರುವ ಗುರುಪರಂಪರೆಯ ಪ್ರಕಾರ ಶ್ರೀ ವಿಜಯತೀರ್ಥರು ಪರಂಪರೆ ಯಲ್ಲಿ ಐದನೆಯ ಯತಿಗಳು; ಶ್ರೀ ವಿಜಯಧ್ವಜತೀರ್ಥರ ಪರಮ ಗುರುಗಳು; ವಿಜಯತೀರ್ಥರ ಶಿಷ್ಯ ಮಹೇಂದ್ರ ತೀರ್ಥರು; ಅವರ ಶಿಷ್ಯ ವಿಜಯಧ್ವಜ ತೀರ್ಥರು; ಪರಂಪರೆಯಲ್ಲಿ ಏಳನೆಯವರು.

ಈ ಹಳೆಯ ದಾಖಲೆಯ ಪ್ರಕಾರ ವಿಜಯತೀರ್ಥರು ವಿಜಯಧ್ವಜತೀರ್ಥರ ಪರಮ ಗುರುಗಳಲ್ಲ; ಬದಲಾಗಿ ವಿಜಯಧ್ವಜರ ಅನಂತರ ಒಂಭತ್ತನೆಯ ತಲೆಮಾರಿನಲ್ಲಿ ಬರುವವರು; ಗುರು ಪರಂಪರೆಯಲ್ಲಿ ೧೫ನೆಯವರು; ವಿಜಯಧ್ವಜತೀರ್ಥರು ಪರಂಪರೆಯಲ್ಲಿ ಆರನೆಯವರು.

(೨) ಪ್ರಚಲಿತ ಗುರುಪರಂಪರೆಯ ಪ್ರಕಾರ ವಿಜಯಧ್ವಜತೀರ್ಥರ ಶಿಷ್ಯರು ದಾಮೋದರ ತೀರ್ಥರು ಪರಂಪರೆಯಲ್ಲಿ ಎಂಟನೆಯವರು.

ಈ ಹಳೆಯ ದಾಖಲೆ ವಿಜಯಧ್ವಜತೀರ್ಥರ ಮತ್ತು ದಾಮೋದರತೀರ್ಥರ ನಡುವೆ ಇನ್ನಿಬ್ಬರು ಯತಿಗಳನ್ನು ಉಲ್ಲೇಖಿಸುತ್ತದೆ. ಅದರಂತೆ ವಿಜಯಧ್ವಜತೀರ್ಥರು ಪರಂಪರೆಯಲ್ಲಿ ಆರನೆಯವರಾದರೆ

ದಾಮೋದರತೀರ್ಥರು ಒಂಭತ್ತನೆಯವರು. ನಡುವೆ ಏಳನೆಯವರು, ವಿಜಯಧ್ವಜತೀರ್ಥರ ಸಾಕ್ಷಾತ್ ಶಿಷ್ಯರು ಉತ್ತಮತೀರ್ಥರು. ಎಂಟನೆಯವರು, ಅವರ ಶಿಷ್ಯ ಚಿಂತಾಮಣಿತೀರ್ಥರು. ಹೊಸ ಪರಂಪರಾ ಶ್ಲೋಕದಲ್ಲಿ ಈ ಇಬ್ಬರ ಹೆಸರೂ ಬಿಟ್ಟು ಹೋಗಿದೆ.

(೩) ಹೊಸ ಗುರು ಪರಂಪರೆಯ ಪ್ರಕಾರ ವೇದಗರ್ಭತೀರ್ಥರ (೧೧ ನೆಯವರು) ಶಿಷ್ಯ ಚಾರುಪ್ರಜ್ಞತೀರ್ಥರು (೧೨ನೆಯವರು).

ಈ ಹಳೆಯ ದಾಖಲೆಯ ಪ್ರಕಾರ ಪರಂಪರೆಯಲ್ಲಿ ೧೩ನೇ ಯವರಾದ ಇವರ ಹೆಸರು ಅಣುಪ್ರಜ್ಞ ತೀರ್ಥರು, ಚಾರುಪ್ರಜ್ಞರಲ್ಲ.

ಈ ದಾಖಲೆಗಳಲ್ಲಿನ ವ್ಯತ್ಯಾಸದ ಬಗೆಗೆ ಸ್ವಲ್ಪ ವಿಮರ್ಶಿಸುವುದು ಅಗತ್ಯವಿದೆ. ಮೊದಲನೆಯ ಪ್ರಶ್ನೆ: ವಿಜಯತೀರ್ಥರು ಐದನೆಯವರೆ, ಹದಿನೈದನೆಯವರೆ ಎನ್ನುವುದು.

ಈಗಣ ನಂಬಿಕೆಯಂತೆ ಅವರು ವಿಜಯಧ್ವಜರಿಗಿಂತ ಪ್ರಾಚೀನರು – ಪರಂಪರೆಯಲ್ಲಿ ಐದನೆಯವರು ಎನ್ನುವುದಕ್ಕೆ ಪೋಷಕವಾದ ಕೆಲವು ಅಂಶಗಳಿವೆ. ಮುಖ್ಯವಾದ ಮಾತು – ವಿಜಯಧ್ವಜರು ತನ್ನ ಭಾಗವತ ವ್ಯಾಖ್ಯಾನದ ಪ್ರಾರಂಭದಲ್ಲಿ ವಿಜಯತೀರ್ಥರನ್ನು ನಮಸ್ಕರಿಸಿದ್ದು:

**ಆನಂದತೀರ್ಥ ವಿಜಯ –**

**ತೀರ್ಥೌ ಪ್ರಣಮ್ಯ ಮಸ್ಕರಿವರವಂದ್ಯೌ ।**

**ತತ್‌ಕೃತಿಮುಪಜೀವ್ಯಾಹಂ**

**ಪ್ರವಚ್ಮಿ ಭಾಗವತ ಪುರಾಣಮ್ ।**

(ಯತಿ ಶ್ರೇಷ್ಠರಿಂದಲೂ ವಂದ್ಯರಾದ ಆನಂದತೀರ್ಥರನ್ನೂ ವಿಜಯತೀರ್ಥರನ್ನೂ ನಮಸ್ಕರಿಸಿ, ಅವರ ಕೃತಿಗಳನ್ನೇ ಮೂಲಾಧಾರವಾಗಿಟ್ಟುಕೊಂಡು ನಾನು ಭಾಗವತದ ಅರ್ಥವನ್ನು ವಿವರಿಸುತ್ತೇನೆ).

ಈ ಒಂದು ಪದ್ಯದ ಆಧಾರದ ಮೇಲೆ ವಿಜಯತೀರ್ಥರು ವಿಜಯಧ್ವಜರಿಗಿಂತ ಪ್ರಾಚೀನರೆಂದೂ ಅವರು ಭಾಗವತಕ್ಕೊಂದು ಟೀಕೆಯನ್ನು ಬರೆದಿರಬೇಕೆಂದೂ ಅರ್ವಾಚೀನ ವಿಮರ್ಶಕರು ತೀರ್ಮಾನಕ್ಕೆ ಬಂದದ್ದುಂಟು. ಆದರೆ ಈ ಪದ್ಯದ ಪಾಠದ ಮತ್ತು ಪ್ರಾಮಾಣಿಕತೆಯ ಬಗ್ಗೆಯೆ ಸಂಶಯವುಂಟು.

(೧) 'ಆನಂದತೀರ್ಥ ವಿಜಯತೀರ್ಥೌ' ಎನ್ನುವುದು ಸರಿಯಾದ ಪಾಠವಲ್ಲ. 'ಅನಂತತೀರ್ಥ ವಿಜಯತೀರ್ಥೌ' ಎಂದಾಗ ಬೇಕು – ಎಂದು ಒಂದು ವಾದವುಂಟು. ಪ್ರಾಚೀನ ಪಾಠ ಸಂಪ್ರದಾಯಗಳ ಬಗ್ಗೆ ತುಂಬ ಆಳವಾದ ಪರಿಜ್ಞಾನವಿದ್ದ, ಹಿಂದಿನ ಕಾಣಿಯೂರು ಮಠಾಧೀಶರಾದ ಶ್ರೀವಿದ್ಯಾಸಮುದ್ರ ತೀರ್ಥರು 'ಅನಂತತೀರ್ಥ ವಿಜಯತೀರ್ಥೌ' ಎನ್ನುವ ಪಾಠವನ್ನು ಸಮರ್ಥಿಸಿದವರಲ್ಲಿ ಮೊದಲಿಗರು. ಇದು ಔಚಿತ್ಯಪೂರ್ಣವೂ ಹೌದು. ಅನಂತತೀರ್ಥರು ವಿಜಯಧ್ವಜರಿಗಿಂತ ಮೊದಲು ಭಾಗವತಕ್ಕೆ ವ್ಯಾಖ್ಯಾನ ಬರೆದ ಹಿರಿಯ ವಿದ್ವಾಂಸರು. ಅವರ ಕೃತಿ ಅಪೂರ್ಣವಾಗಿಯಾದರೂ ಈಗ ಉಪಲಬ್ಧವಾಗಿದೆ. ಅದರ ತಾಡವಾಲೆ ಪ್ರತಿ ನನ್ನ ಬಳಿಯಿದೆ. ಆದರೆ ಈ ಅನಂತತೀರ್ಥರು ಪೇಜಾವರ ಮಠದ ಗುರುಪರಂಪರೆಯಲ್ಲಿ ಸೇರಿದವರಲ್ಲ. ಪ್ರಾಯಃ ಅವರು ಯಾವ ಮಠದ ಪೀಠಾಧಿಪತಿಯಾಗಿಯೂ ಆಗಿರಲಿಲ್ಲ. ಬಿಡಿ ಸನ್ಯಾಸಿಯಾಗಿಯೇ ಬದುಕಿದವರು. ಹಾಗೆಯೇ ವಿಜಯತೀರ್ಥರು ಎನ್ನುವ ಇನ್ನೊಬ್ಬ ಯತಿಗಳೂ ಭಾಗವತಕ್ಕೆ ವ್ಯಾಖ್ಯಾನ ಬರೆದಿರಬಹುದು. ಈಗ ಅದು ಉಪಲಬ್ಧವಿರದಿದ್ದರೂ ವಿಜಯಧ್ವಜರ ಕಾಲದಲ್ಲಿ ಅದು ಜನಪ್ರಿಯವಾಗಿದ್ದು ಅದನ್ನು ಆಧಾರವಾಗಿ ಬಳಸಿಕೊಂಡಿರುವ ಸಾಧ್ಯತೆಯನ್ನು ಅಲ್ಲಗಳೆಯುವಂತಿಲ್ಲ. ಅವರೂ ಅನಂತ ತೀರ್ಥರಂತೆಯೇ ಬಿಡಿ ಸನ್ಯಾಸಿಗಳಾಗಿರಬಹುದು. ಹೊರತು ಇವರು ವಿಜಯಧ್ವಜರ ಪರಮ ಗುರುಗಳಾಗಿದ್ದು ಪೇಜಾವರ ಮಠದ ಪೀಠಾಧಿಪತಿಗಳಾಗಿದ್ದರು ಎನ್ನುವುದರ ಬಗೆಗೆ ಈ ಶ್ಲೋಕ ಯಾವ ಸುಳಿವನ್ನೂ ನೀಡುವುದಿಲ್ಲ.

(೨) ಎರಡನೆಯದಾಗಿ ಈ ಶ್ಲೋಕದಲ್ಲಿ ಛಂದೋ ದೋಷಗಳಿರುವುದರಿಂದ (ಮುಖ್ಯವಾಗಿ ಕೊನೆಯ ಪಾದದಲ್ಲಿ ೧೫ರ ಬದಲು ೧೪ ಮಾತ್ರೆಗಳಿವೆ). ಈ ಪದ್ಯ ವಿಜಯಧ್ವಜರ ರಚನೆ ಹೌದೇ ಅಲ್ಲವೇ ಎನ್ನುವುದೇ ಸಂದೇಹಗ್ರಸ್ತ. ವಿಜಯಧ್ವಜೀಯ ಟೀಕೆಯ ಶುದ್ಧಮೂಲ ಪಾಠ (ಐದನೆಯ ಸ್ಕಂಧದ ಕೆಲವು ಅಧ್ಯಾಯಗಳನ್ನು ಬಿಟ್ಟರೆ) ಈ ತನಕ ಸಿಕ್ಕಿಲ್ಲವಾದ ಕಾರಣ, ಈಗ ಪ್ರಕಟವಾದ ವಿಜಯ ಧ್ವಜೀಯ ಅನೇಕ ಅಸಂಗತ ಪ್ರಕ್ಷಿಪ್ತ ಅಂಶಗಳಿಂದ ಕೂಡಿರುವುದರಿಂದ ಈ ಪದ್ಯ ವಿಜಯಧ್ವಜರದ್ದೇ ರಚನೆ ಎಂದು ಖಚಿತವಾಗಿ ಹೇಳುವುದು ಅಸಾಧ್ಯ. ಇದೂ ಪ್ರಕ್ಷಿಪ್ತವಾಗಿರುವ ಸಾಧ್ಯತೆಯುಂಟು. ಅದರಂತೆ ಗುರುಪರಂಪರೆಯ ತೀರ್ಮಾನಕ್ಕೆ ಈ ಪದ್ಯ ಯಾವ ನಿಟ್ಟಿನಲ್ಲೂ ಸಹಕಾರಿಯಲ್ಲ.

ಈ ಎಲ್ಲ ಹಿನ್ನೆಲೆಯನ್ನು ಪರಿಶೀಲಿಸಿದರೆ, ಗುರುಪರಂಪರೆಯ ಪ್ರಾಚೀನ ದಾಖಲೆಯನ್ನೇ ಅಧಿಕೃತವೆಂದು ಪರಿಗ್ರಹಿಸಿ ಪೇಜಾವರ ಮಠದ ಗುರುಪರಂಪರೆಯಲ್ಲಿ ಬರುವ ವಿಜಯ ತೀರ್ಥರು ಪರಂಪರೆಯಲ್ಲಿ ೧೫ನೆಯವರು ಎನ್ನುವ ಮಾತು ಸದ್ಯದ ಮಟ್ಟಿಗೆ ಸಮರ್ಥನೀಯ ಎನ್ನಿಸುತ್ತದೆ.

ವಿಜಯಧ್ವಜರ ಅನಂತರದ ಇಬ್ಬರು ಯತಿಗಳ ಹೆಸರು ಅರ್ವಾಚೀನ ಪರಂಪರಾ ಶ್ಲೋಕದಲ್ಲಿ ಬಿಟ್ಟುಹೋಗಿರುವುದು, ಇನ್ನೊಂದು ಕುತೂಹಲಕರ ಸಂಗತಿ. ಇದರಲ್ಲಿಯೂ ಪ್ರಾಚೀನ ದಾಖಲೆಯೇ ಹೆಚ್ಚು ಮಹತ್ತ್ವದ್ದಾಗುತ್ತದೆ. ಏಕೆಂದರೆ ಪ್ರಾಚೀನ ದಾಖಲೆಗಳಲ್ಲಿ ಹೊಸ ಹೆಸರು ಸೇರ್ಪಡೆಯಾಗುವ ಸಾಧ್ಯತೆ ಇಲ್ಲ; ಆದರೆ ಹೊಸ ದಾಖಲೆಗಳಲ್ಲಿ ಹಳೆಯ ಹೆಸರು ಬಿಟ್ಟುಹೋಗುವ ಸಾಧ್ಯತೆ ಉಂಟು. ಇದಕ್ಕೆ ಒಂದು ಸೂಚನೆಯೂ ಹೊಸ ಪರಂಪರಾ ಶ್ಲೋಕದಲ್ಲಿದೆ. ವಿಜಯಧ್ವಜರ ಬಗ್ಗೆ ಅದರಲ್ಲಿ ಬರುವ ಉಲ್ಲೇಖ ಹೀಗಿದೆ:

**"ಸಂಸೇವೇ ವಿಜಯಧ್ವಜೋತ್ತ ಪರಿವ್ರಾಡ್ ವೃಂದೈಕ (?ದಚಿಂ) ಚಿಂತಾಮಣಿಮ್"**

ಇಲ್ಲಿ 'ಉತ್ತಮ' ಮತ್ತು 'ಚಿಂತಾಮಣಿ' ಎಂಬ ಎರಡು ಪದಗಳಿದ್ದರೂ ಅವನ್ನು ವಿಜಯಧ್ವಜರಿಗೆ ವಿಶೇಷಣವಾಗಿ ಬಳಸಲಾಗಿದೆ. ಛಂದಸ್ಸಿನ ದೃಷ್ಟಿಯಿಂದಲೂ ಅರ್ಥದ ದೃಷ್ಟಿಯಿಂದಲೂ ಅಸಂಗತವಾಗಿರುವ ಮುಂದಿನ ತಲೆಮಾರಿನವರ ಅಜ್ಞಾನದಿಂದ ರೂಪಾಂತರಗೊಂಡದ್ದು ಎನ್ನುವುದು ಸ್ಪಷ್ಟ. ಇದರ ನಿಜವಾದ ಪಾಠ ಹೀಗಿದ್ದಿರಬೇಕು:

**"ಸಂಸೇವೇ ವಿಜಯ ಧ್ವಜೋತ್ತಮ ಪರಿವ್ರಾಜೌ ಚ ಚಿಂತಾಮಣಿಮ್".**

ಹೀಗೆ ಈ ಶ್ಲೋಕ ಕೂಡ ಛಂದೋಬದ್ಧವಾಗಿ ರೂಪಾಂತರಗೊಂಡಾಗ ಪ್ರಾಚೀನ ದಾಖಲೆಗೆ ಅನುಗುಣವಾಗಿ ಮೂರು ಯತಿಗಳನ್ನೂ ಉಲ್ಲೇಖಿಸುತ್ತದೆ ಎನ್ನುವುದು ಗಮನಾರ್ಹ. ಹೀಗಾಗಿ ವಿಜಯಧ್ವಜ ತೀರ್ಥರ ಶಿಷ್ಯರು ಉತ್ತಮತೀರ್ಥರು; ಅವರ ಶಿಷ್ಯರು ಚಿಂತಾಮಣಿತೀರ್ಥರು ಮತ್ತು ಚಿಂತಾಮಣಿತೀರ್ಥರ ಶಿಷ್ಯರು ದಾಮೋದರತೀರ್ಥರು ಎನ್ನುವುದು ಎಲ್ಲ ದಾಖಲೆಗಳಿಗೂ ಹೊಂದಿಕೆಯಾಗುವ ನಿರ್ವಿವಾದಾಂಶ. ಈ ಇಬ್ಬರು ಯತಿಗಳನ್ನೇ ಪರಂಪರೆ ಮರೆತುಬಿಟ್ಟಿರುವುದು ನಮ್ಮ ಜಡ ಸಂಪ್ರದಾಯದ ಪ್ರಜ್ಞಾದಾರಿದ್ರ್ಯವನ್ನು ಸೂಚಿಸುವ ಶೋಚನಿಯಾಂಶ.

ಕೊನೆಯದಾಗಿ ಅಣುಪ್ರಜ್ಞರು ಚಾರುಪ್ರಜ್ಞರಾದ ಮೋಜಿನ ಕಥೆ. ಇದಕ್ಕೂ ಸಂಪ್ರದಾಯವಾದಿಗಳ ದಡ್ಡತನವೇ ಕಾರಣ. ಅರ್ವಾಚೀನ ಗುರುಪರಂಪರೆಯಲ್ಲಿ ಈಗ ಹೀಗೊಂದು ಪದ್ಯವನ್ನು ಪಠಿಸುತ್ತಾರೆ:

**ವಂದೇ ಽಹಂ ನನು ವೇದಗರ್ಭಮಥ ಚಾರುಪ್ರಜ್ಞ ತೀರ್ಥಂ ಮುದಾ –**

ಇದರ ನಿಜವಾದ ಪಾಠ ಹೀಗಾಗಬೇಕಿತ್ತು:

**"ವಂದೇಽಹಂ ನನು ವೇದಗರ್ಭಮಥ ಚಾಣುಪ್ರಜ್ಞ ತೀರ್ಥಂ ಮುದಾ"** – ಇಲ್ಲಿ ಚಾಣುಪ್ರಜ್ಞ

ತೀರ್ಥಂ (ಚ+ಅಣುಪ್ರಜ್ಞ ತೀರ್ಥಂ) ಎಂಬ ಪದವನ್ನು ವಿಭಾಗ ಮಾಡಲು ತಿಳಿಯದೆ, ಸಂಪ್ರದಾಯವನ್ನೂ ತಿಳಿಯದೆ ತಮಗೆ ತಿಳಿಯದ 'ಚಾಣುಪ್ರಜ್ಞ'ವನ್ನು ತಮಗೆ ಹೊಳೆದಂತೆ 'ಚಾರುಪ್ರಜ್ಞ' ಎಂದು ಬದಲಿಸಿಕೊಂಡ ದಡ್ಡ ಆಸ್ಥಾನ ವಿದ್ವಾಂಸರ ಕೈವಾಡ ಸ್ಪಷ್ಟ. ಸಂಪ್ರದಾಯದಲ್ಲಿ ಜಿಡ್ಡು ಕಟ್ಟಿದ ದಡ್ಡತನ ಇತಿಹಾಸಕ್ಕೆ ಎಂಥ ಅಪಚಾರ ಮಾಡುತ್ತದೆ ಎನ್ನುವುದಕ್ಕೆ ಇದೊಂದು ಒಳ್ಳೆಯ ನಿದರ್ಶನ. ಆದರೆ ಶುದ್ಧವಾದ ಇತಿಹಾಸಕ್ಕಿಂತಲೂ ಶುದ್ಧವಾದ ಪರಂಪರೆಯ ತಿಳಿವಿಗಿಂತಲೂ ಇಂಥ ಸಂಪ್ರದಾಯದ ಪ್ರಮಾದ– ಮೊದ್ದುತನಗಳ ಪ್ರಿಯವಾದ ರಕ್ಷಾಕವಚವಾಗಿ ಉಳಿದಿರುವದು ದುರ್ದೈವದ ಸಂಗತಿ. ಅಂಥ ವರು ಇಷ್ಟು ಸ್ಪಷ್ಟವಾಗಿ ಕನ್ನಡಿಯಂತೆ ಸತ್ಯವನ್ನು ತೆರೆದಿಟ್ಟರೂ ತಮ್ಮ ಸಂಪ್ರದಾಯದ ಚಿಪ್ಪಿನಿಂದ ಹೊರ ಬರಲು ಇಷ್ಟಪಡುವುದಿಲ್ಲ, ಎನ್ನುವುದು ನನಗೆ ಗೊತ್ತಿದೆ. ಆದರೂ ಸತ್ಯಾನ್ವೇಷಣೆಯ ಹಸಿವು ಇರುವ ಮಂದಿಗಾದರೂ ಇದೊಂದು ಹೊಸಬೆಳಕು ನೀಡುವ ಅಂಶ ಗಮನಕ್ಕೆ ಬರಬೇಕು. ಅದರಿಂದ ಆಗುವ ನೆಮ್ಮದಿ ಅಪಾರ.

ಪ್ರಾಚೀನ ದಾಖಲೆಯ ಗುರು ಪರಂಪರಾ ಶ್ಲೋಕದ ಪೂರ್ತಿ ಪಾಠ ಹೀಗಿದೆ:

ಶ್ರೀಮಂತಂ ಕಮಲಾಕಾಂತ ಸಂತತಧ್ಯಾನತತ್ಪರಮ್ ।
ಅಧೋಕ್ಷಜಮುನಿಂ ಶಾಂತಂ ವಂದೇ ವಿಟ್ಠಲಪೂಜಕಮ್ ॥೧॥

ಕಮಲೇಶ ಲಸತ್‌ಪಾದ ಕಮಲಾರ್ಪಿತಮಾನಸಮ್ ।
ಕಮಲಾಕ್ಷಾಖ್ಯಯೋಗೀಂದ್ರಂ ವಂದೇ ವಿಟ್ಠಲ ॥೨॥

ಪೂರ್ಣಪ್ರಜ್ಞಮತಾಂಬೋಧಿಪೂರ್ಣಚಂದ್ರನಿಭಂ ಗುರುಮ್।
ಪುಷ್ಕರಾಕ್ಷಂ ಗುಣೋದೀರ್ಣಂ ವಂದೇ ॥೩॥

ಶಂಭುಮುಖ್ಯಾಮರಸ್ತುತ್ಯ ಶ್ರೀಕೃಷ್ಣ ಚರಣಾರ್ಚಕಮ್ ।
ಅಮರೇಂದ್ರಾಖ್ಯಹಂಸೇಂದ್ರಂ ವಂದೇ ॥೪॥

ಮಹೇಂದ್ರಾವರಜಂ ಕೃಷ್ಣಂ ಪೂಜಯಂತಂ ಸುಭಕ್ತಿತಃ ।
ಮಹೇಂದ್ರಾಹ್ವಯಯೋಗೀಂದ್ರಂ ವಂದೇ ॥೫॥

ಶ್ರೀಮದ್‌ಭಾಗವತಾರ್ಥಾಬ್ಜಮಿಹಿರಂ ಸರ್ವದಿಗ್‌ಜಯಮ್ ।
ವಿಜಯಧ್ವಜಯೋಗೀಂದ್ರಂ ವಂದೇ ॥೬॥

ಪುರುಷೋತ್ತಮ ಪಾದಾಬ್ಜಸೇವಾಯಾಂ ತತ್‌ಪರಂ ಸದಾ ।
ಉತ್ತಮಾಖ್ಯಯತಿಶ್ರೇಷ್ಠಂ ವಂದೇ ॥೭॥

ಧೀಮತ್‌ಸುಭೂರಾಭೀಷ್ಟಚಿಂತಾಮಣಿಮಘೋಜ್ಝಿತಮ್ ।
ಚಿಂತಾಮಣಿಯತಿಶ್ರೇಷ್ಠಂ ವಂದೇ ॥೮॥

ದಾಮೋದರ ಪದಾಂಭೋಜಧ್ಯಾನಧೂತಮಲಾಶಯಮ್ ।
ದಾಮೋದರ ಪರಿವ್ರಾಜಂ ವಂದೇ ॥೯॥

ವಾಸುದೇವಾಂಘ್ರಿಕಮಲಯುಗಳೇ ಭ್ರಮರಾಯಿತಮ್ ।
ವಾಸುದೇವಾಹ್ವಯಂ ಭಿಕ್ಷುಂ ವಂದೇ ॥೧೦॥

ದುರ್ವಾದಿಮತ್ತಮಾತಂಗ ಕುಂಭಭೇದಿಮೃಗಾಧಿಪಮ್ ।
ವಾದೀಂದ್ರಯತಿನೇತಾರಂ ವಂದೇ ॥೧೧॥

ವೇದಶಾಸ್ತ್ರಪುರಾಣಾಬ್ಧಿನಿಶಾಕರನಿಭಂ ಗುರುಮ್ ।
ಶ್ರೀಮಂತಂ ವೇದಗರ್ಭಾಖ್ಯಂ ವಂದೇ ॥೧೨॥
ಕಲಿವರ್ಣ್ಯವರಶ್ಲೋಕಂ ಪ್ರಾಜ್ಞಮೌಲಿಂ ಬುಧಾಶ್ರಯಮ್ ।
ಸದಣುಪ್ರಜ್ಞಯೋಗೀಂದ್ರಂ ವಂದೇ ॥೧೩॥
ವಿಶ್ವಪ್ರಜ್ಞಲಸಚ್ಛಾಸ್ತ್ರಂ ಸುಪ್ರಜ್ಞಾನಂದವಾರಿಧಿಮ್ ।
ವಿಶ್ವ ಪ್ರಜ್ಞಾಹ್ವಯಂ ಭಿಕ್ಷುಂ ವಂದೇ ॥೧೪॥
ವಿಜಿತಾಹಿತಷಡ್ವರ್ಗಂ ವಿಶುದ್ಧಜ್ಞಾನಸಂಯುತಮ್ ।
ವಿಜಯಾಹ್ವಯಸತ್ತೀರ್ಥಂ ವಂದೇ ॥೧೫॥
ವಿಶ್ವೋದ್ಭವಸ್ಥಿತಿಲಯಕಾರಣೇ ತತ್ಪರಂ ಹರೌ ।
ವಿಶ್ವೇಶ್ವರಾಖ್ಯಹಂಸೇಂದ್ರಂ ವಂದೇ ॥೧೬॥
ವೀತದೋಷಂ ಬುಧಸಭಾಭೂಷಣಂ ಭುವನಪ್ರಿಯಮ್ ।
ವಿಶ್ವಭೂಷಣಯೋಗೀಂದ್ರಂ ವಂದೇ ॥೧೭॥
ವಿದ್ವಜ್ಜನೈಃ ಸದಾ ವಂದ್ಯಂ ವಿಪುಲಾಭಿಖ್ಯಯಾ ಯುತಮ್ ।
ವಿಶ್ವವಂದ್ಯಾಹ್ವಯಂ ಭಿಕ್ಷುಂ ವಂದೇ ॥೧೮॥
ರಾಜರಾಜಸಮಂ ನಿತ್ಯಮೌದಾರ್ಯಗುಣವಾರಿಧಿಮ್ ।
ವಿದ್ಯಾರಾಜಪರಿವ್ರಾಜಂ ವಂದೇ ॥೧೯॥
ಶ್ರೀಮದ್ ವಿಟ್ಠಲಸನ್ಮೂರ್ತಿಸಂತತಸ್ಮರಣೋಜ್ಜ್ವಲಮ್ ।
ವಿಶ್ವಮೂರ್ತ್ಯಾಖ್ಯಯೋಗೀಂದ್ರಂ ವಂದೇ ॥೨೦॥
ಸಾಧುಲೋಕತಮೋಧ್ವಂಸಂ ಮಧ್ವಚಂ (?ದ್ರ) ಮುದಾವಹಮ್ ।
ವಿಶ್ವಪತ್ಯಾಖ್ಯಯೋಗೀಂದ್ರಂ ವಂದೇ ॥೨೧॥
ವಿಶ್ವಶಾಸ್ತ್ರಪುರಾಣಜ್ಞಂ ವಿಷ್ವಗ್ವ್ಯಾಪ್ತಯಶೋವೃತಮ್ ।
ವಿಶ್ವನಿಧ್ಯಾಖ್ಯಯೋಗೀಂದ್ರಂ ವಂದೇ ॥೨೨॥
ತಂತ್ರಸಾರೋಕ್ತ ಸನ್ಮಂತ್ರಜಪವ್ಯಾಖ್ಯಾನ ಕೌಶಲಮ್ ।
ವಿಶ್ವಾಧೀಶಾಖ್ಯಯೋಗೀಂದ್ರಂ ವಂದೇ ॥೨೩॥
ವೈರಾಗ್ಯಭಕ್ತ್ಯನಶನತಪಃ ಪ್ರಾಭವವೈಭವಮ್ ।
ವಿಶ್ವಾಧಿರಾಜಯೋಗೀಂದ್ರಂ ವಂದೇ ॥೨೪॥
ಬ್ರಹ್ಮರಾಕ್ಷಸಭೂತಾದಿಪ್ರೋಚ್ಚಾಟನವಿಚಕ್ಷಣಮ್ ।
ವಿಶ್ವಬೋಧಗುರುಂ ನಿತ್ಯಂ ವಂದೇ ವಿಟ್ಠಲ ಪೂಜಕಮ್ ॥೨೫॥

ಈ ಹಳೆಯ ದಾಖಲೆಯ ಪ್ರಕಾರ ಪ್ರಾರಂಭದಿಂದ ೨೫ನೆಯ ಯತಿಗಳ ತನಕದ ಗುರು ಪರಂಪರೆ ಹೀಗಿದೆ:

೧. ಶ್ರೀ ಅಧೋಕ್ಷಜತೀರ್ಥ
೨. ಶ್ರೀ ಕಮಲಾಕ್ಷತೀರ್ಥ
೩. ಶ್ರೀ ಪುಷ್ಕರಾಕ್ಷತೀರ್ಥ

೪. ಶ್ರೀ ಅಮರೇಂದ್ರತೀರ್ಥ
೫. ಶ್ರೀ ಮಹೇಂದ್ರತೀರ್ಥ
೬. ಶ್ರೀ ವಿಜಯಧ್ವಜತೀರ್ಥ
೭. ಶ್ರೀ ಉತ್ತಮತೀರ್ಥ
೮. ಶ್ರೀ ಚಿಂತಾಮಣಿತೀರ್ಥ
೯. ಶ್ರೀ ದಾಮೋದರತೀರ್ಥ
೧೦. ಶ್ರೀ ವಾಸುದೇವತೀರ್ಥ
೧೧. ಶ್ರೀವಾದೀಂದ್ರತೀರ್ಥ
೧೨. ಶ್ರೀ ವೇದಗರ್ಭತೀರ್ಥ
೧೩. ಶ್ರೀ ಅಣುಪ್ರಜ್ಞತೀರ್ಥ
೧೪. ಶ್ರೀ ವಿಶ್ವಪ್ರಜ್ಞತೀರ್ಥ
೧೫. ಶ್ರೀ ವಿಜಯತೀರ್ಥ
೧೬. ಶ್ರೀ ವಿಶ್ವೇಶ್ವರತೀರ್ಥ
೧೭. ಶ್ರೀ ವಿಶ್ವಭೂಷಣತೀರ್ಥ
೧೮. ಶ್ರೀ ವಿಶ್ವವಂದ್ಯ ತೀರ್ಥ
೧೯. ಶ್ರೀ ವಿದ್ಯಾರಾಜತೀರ್ಥ
೨೦. ಶ್ರೀ ವಿಶ್ವಮೂರ್ತಿತೀರ್ಥ
೨೧. ಶ್ರೀ ವಿಶ್ವಪತಿತೀರ್ಥ
೨೨. ಶ್ರೀ ವಿಶ್ವನಿಧಿತೀರ್ಥ
೨೩. ಶ್ರೀ ವಿಶ್ವಾಧೀಶತೀರ್ಥ
೨೪. ಶ್ರೀ ವಿಶ್ವಾಧಿರಾಜತೀರ್ಥ
೨೫. ಶ್ರೀ ವಿಶ್ವಬೋಧತೀರ್ಥ

ಇಲ್ಲಿಗೆ ಈ ಪುಸ್ತಕದ ಗುರು ಪರಂಪರೆ ಮುಗಿಯುತ್ತದೆ. ಅದರ ಅನಂತರದ ಗುರು ಪರಂಪರೆಯಲ್ಲಿ ಯಾವುದೇ ವಿವಾದಗ್ರಸ್ತ ಅಂಶಗಳಿಲ್ಲ. ಅರ್ವಾಚೀನ ದಾಖಲೆಗಳಲ್ಲಿ ಕಂಡುಬರುವಂತೆ ಅನಂತರದ ಯತಿಗಳ ಹೆಸರು ಈ ರೀತಿಯಾಗಿದೆ:

೨೬. ಶ್ರೀ ವಿಶ್ವವಲ್ಲಭತೀರ್ಥ
೨೭. ಶ್ರೀ ವಿಶ್ವಪ್ರಿಯತೀರ್ಥ
೨೮. ಶ್ರೀ ವಿಶ್ವವರ್ಯತೀರ್ಥ
೨೯. ಶ್ರೀ ವಿಶ್ವರಾಜತೀರ್ಥ
೩೦. ಶ್ರೀ ವಿಶ್ವಮನೋಹರತೀರ್ಥ
೩೧. ಶ್ರೀ ವಿಶ್ವಜ್ಞತೀರ್ಥ
೩೨. ಶ್ರೀ ವಿಶ್ವಮಾನ್ಯತೀರ್ಥ
೩೩. ಶ್ರೀ ವಿಶ್ವೇಶತೀರ್ಥ (ಈಗಣ ಪೀಠಾಧಿಪತಿಗಳು)

('ದೀಕ್ಷಾ', ಪೇಜಾವರ ಮಠ, ಉಡುಪಿ, ೧೯೮೪)

●

೧-೬

# ಶ್ರೀ ವಿಶ್ವಜ್ಞತೀರ್ಥ ಶ್ರೀಪಾದಂಗಳವರು

## ನಾನು ಕಂಡಂತೆ

ಅನೇಕ ಮಂದಿ ವಿದ್ವಾಂಸ ಯತಿಗಳನ್ನು ಸಮಾಜಕ್ಕೆ ನೀಡಿದ ಕೀರ್ತಿ ಪೇಜಾವರ ಮಠಕ್ಕೆ ಇದೆ.

ಶ್ರೀಮನ್ಮಧ್ವಾಚಾರ್ಯರ ಪ್ರಥಮ ಎಂಟು ಮಂದಿ ಶಿಷ್ಯರಲ್ಲಿ ಒಬ್ಬರಾದ ಶ್ರೀ ಅಕ್ಷೋಭ್ಯತೀರ್ಥರು ಈ ಮಠದ ಪರಂಪರೆಯಲ್ಲಿ ಮೊದಲಿಗರು. ಈ ಮಠದ ಎರಡನೇ ಯತಿ ಶ್ರೀ ಕಮಲಾಕ್ಷತೀರ್ಥರು ಗೀತ ಕಾವ್ಯಗಳನ್ನು ಬರೆದು ಪ್ರಸಿದ್ಧರಾದರು. ಐದನೆ ಯತಿ ಶ್ರೀ ವಿಜಯತೀರ್ಥರು ಭಾಗವತಕ್ಕೆ ಟೀಕೆ ಬರೆದಿದ್ದಾರೆ ಎಂಬ ಐತಿಹ್ಯ ಉಂಟು. ಇವರ ಪ್ರಶಿಷ್ಯರಾದ ಶ್ರೀ ವಿಜಯಧ್ವಜರು ಅವರನ್ನು ಕೃತಿಕಾರರೆಂದು ಉಲ್ಲೇಖಿಸಿದ್ದಾರೆ. ಆದರೆ ಇವರ ಯಾವ ಕೃತಿಯೂ ಈ ವರೆಗೆ ಉಪಲಬ್ಧವಾಗಿಲ್ಲ. ಏಳನೆಯವರಾದ ಶ್ರೀ ವಿಜಯಧ್ವಜರು ಪೇಜಾವರ ಮಠದ ಪರಂಪರೆಯಲ್ಲಿ ಮೂಡಿಬಂದ ವಿಭೂತಿ ಪುರುಷ. ಸಂಸ್ಕೃತ ಸಾಹಿತ್ಯದಲ್ಲೇ ಅಪೂರ್ವ ಗ್ರಂಥವಾದ ಭಾಗವತಕ್ಕೆ ವ್ಯಾಖ್ಯಾನ ಬರೆದು ಪ್ರಸಿದ್ಧರಾದವರು. ಇವರು ತನ್ನ 'ಪದರತ್ನಾವಳಿ' ಎಂಬ ಟೀಕೆಯಿಂದ ಭಾಗವತದ ಆಧ್ಯಾತ್ಮ ಮುಖಕ್ಕೆ ಹೊಸ ಬೆಳಕು ಬೀರಿದ್ದಾರೆ. ಇವರು ಹಲವು ಸ್ತೋತ್ರಗಳನ್ನು ಬರೆದಿದ್ದಾರೆ. ಇವರು ತಮ್ಮ ಪ್ರವಚನ ಕಾಲದಲ್ಲಿ ಗಾಳಿಯಿಂದ ಶಬ್ದಮಾಡುತ್ತಿದ್ದ ಮರ-ಗಿಡ-ಎಲೆಗಳನ್ನು ತನ್ನ ತಪಃಶಕ್ತಿಯಿಂದ ಕೈಸನ್ನೆಯಲ್ಲೇ ತಡೆದು ನಿಲ್ಲಿಸಿದರೆಂದು ಪ್ರತೀತಿ ಇದೆ. ಹದಿನೈದನೇ ಯತಿವರ್ಯರಾದ ಶ್ರೀ ವಿಶ್ವೇಶ್ವರತೀರ್ಥರು ಐತರೇಯ ಭಾಷ್ಯದ ಮೇಲೆ ಟೀಕೆ ಮತ್ತು ಗೀತೆಯ ಮೇಲಣ ಟಿಪ್ಪಣಿ ಬರೆದಿದ್ದಾರೆ. ಇಪ್ಪತ್ತನೆಯ ಯತಿವರ್ಯರಾದ ಶ್ರೀ ವಿಶ್ವಪತಿತೀರ್ಥರು ದ್ವಾದಶಸ್ತೋತ್ರ, ಚತುರ್ದಶ ಸ್ತೋತ್ರ, ಪಂಚಸ್ತುತಿ, ಮಧ್ವವಿಜಯ, ಮಣಿಮಂಜರಿ ಮತ್ತು ಸಂಗ್ರಹ ರಾಮಾಯಣಗಳಿಗೆ ಸುಲಭ ಶೈಲಿಯಲ್ಲಿ ಟೀಕೆಗಳನ್ನು ಬರೆದು ಪ್ರಸಿದ್ಧರಾಗಿದ್ದಾರೆ.

ಈ ಪರಂಪರೆಯಲ್ಲೇ ಮೂವತ್ತನೆಯ ಯತಿವರ್ಯರಾಗಿ ಉಜ್ವಲ ಇತಿಹಾಸವನ್ನು ಜ್ವಲಂತವಾಗಿಯೇ ಉಳಿಸಿ ಬೆಳೆಸಿದವರು ಶ್ರೀ ವಿಶ್ವಜ್ಞತೀರ್ಥರು. ಇವರ ಜನ್ಮಸ್ಥಳ ಪುತ್ತೂರು ತಾಲೂಕಿನ ಸುಬ್ರಹ್ಮಣ್ಯದ ಸಮೀಪದ 'ನಗರಿ' ಎಂಬ ಗ್ರಾಮ. ಆಚಾರ್ಯ ಮಧ್ವರು ನಡೆದಾಡಿದ ಸ್ಥಳ. ಈ ಗ್ರಾಮದಲ್ಲಿ ವಾಸವಾಗಿದ್ದ ಹಾಗು ಆಚಾರವಂತರೂ ಸಾತ್ವಿಕರೂ, ದೈವಭಕ್ತಪರಾಯಣರೂ ಆಗಿದ್ದ ಶ್ರೀಯುತ

ನಾರಾಯಣ ಆಚಾರ್ಯ ಮತ್ತು ಸರಸ್ವತಿ ಎಂಬ ದಂಪತಿಗಳ ಸುಪುತ್ರನಾಗಿ ಜನಿಸಿದರು. ಶ್ರೀಗಳವರು ೧೪ನೇ ವಯಸ್ಸಿನಲ್ಲಿ ಸನ್ಯಾಸದೀಕ್ಷೆಯನ್ನು ಪಡೆದು ವಿಶ್ವಜ್ಞತೀರ್ಥರೆಂದು ನಾಮಾಂಕಿತರಾದರು.

ಅಜಾನುಬಾಹುಗಳಾಗಿದ್ದ ಶ್ರೀಗಳವರು ಎರಡು ಕೈಗಳಲ್ಲಿ ಎರಡು ಮುಡಿ ಅಕ್ಕಿಯನ್ನು ಎತ್ತುತ್ತಿದ್ದರು. ಮಹಾ ದೈವಭಕ್ತರೂ, ಕಾರಣೀಕರೂ ಆಗಿದ್ದ ಇವರು ಎರಡು ಬಾರಿ ಶ್ರೀಕೃಷ್ಣನ ಪರ್ಯಾಯ ಪೂಜಾ ಮಹೋತ್ಸವವನ್ನು ವಿಜೃಂಭಣೆಯಿಂದ ನಡೆಸಿದ್ದಾರೆ. ತತ್ತ್ವಜ್ಞಾನಿ, ವೇದಾಂತಿ, ಮಹಾಜ್ಞಾನಿ, ಸದಾ ಅಧ್ಯಯನಶೀಲ, ತಪಸ್ವಿ, ದೈವಚಿಂತನೆಯಲ್ಲಿಯೇ ಪ್ರತೀ ಕ್ಷಣವನ್ನು ಕಳೆದ ವಿಭೂತಿ ಪುರುಷ ಶ್ರೀಗಳವರು.

ತನ್ನ ಪರ್ಯಾಯದ ಅನಂತರ ತೀರ್ಥಯಾತ್ರೆಗೆ ಹೊರಟ ಶ್ರೀಗಳವರು ೧೪ ವರುಷಗಳ ಕಾಲ ಬದರಿಯಿಂದ ಕನ್ಯಾಕುಮಾರಿಯವರೆಗೆ ದಕ್ಷಿಣೋತ್ತರವಾಗಿ, ಪೂರ್ವ-ಪಶ್ಚಿಮವಾಗಿ ಇರುವ ಎಲ್ಲಾ ತೀರ್ಥಕ್ಷೇತ್ರಗಳನ್ನು ಕಾಲುನಡಿಗೆಯಲ್ಲಿಯೇ ಸಂದರ್ಶಿಸಿ, ತನ್ನ ಉಪದೇಶದಿಂದ ಜನರಿಗೆ ಮಾರ್ಗದರ್ಶನ ಮಾಡಿದ್ದಾರೆ. ಶ್ರೀ ಮಧ್ವಾಚಾರ್ಯರ ಕಾಲದಿಂದ ಈ ವರೆಗೆ ಅನೇಕ ಯತಿಗಳು ಜನ್ಮ ತಾಳಿ ತಮ್ಮ ವಿದ್ವತ್ತು , ತಪಃಶಕ್ತಿ ಮುಂತಾದ ಕಾರ್ಯಗಳಿಂದ ಹೆಸರು ಪಡೆದಿದ್ದರೂ ಇಷ್ಟು ದೀರ್ಘಕಾಲ ಬರೇ ಕಾಲುನಡಿಗೆಯಲ್ಲೇ ತೀರ್ಥಯಾತ್ರೆ ಮಾಡಿದವರು ಶ್ರೀ ವಿಶ್ವಜ್ಞತೀರ್ಥರೊಬ್ಬರೇ. ಜಾತಿಮತ ಭೇದವಿಲ್ಲದೆ ಎಲ್ಲರಿಗೂ ಉಪಯುಕ್ತ ರೀತಿಯಲ್ಲಿ ಉಪದೇಶಿಸಿ ತಮ್ಮ ಮುಂದಿನ ಪರ್ಯಾಯಕ್ಕೆ ಬರಬೇಕೆಂಬುದಾಗಿ ತಾನು ಸಂಚಾರ ಮಾಡಿದ ಎಲ್ಲಾ ಸ್ಥಳಗಳಲ್ಲಿ ಆಹ್ವಾನವಿತ್ತರು. ಶ್ರೀಗಳವರನ್ನು ಭಕ್ತಿಯಿಂದ ಸ್ವಾಗತಿಸಿದ ಮುಸಲ್ಮಾನರೊಬ್ಬರನ್ನು ತಮ್ಮ ಪರ್ಯಾಯಕ್ಕೆ ಆಹ್ವಾನಿಸಿದ್ದು, ಆ ಕಾಲದ ಕಟ್ಟುಸಂಪ್ರದಾಯವಾದಿಗಳನ್ನು ರೊಚ್ಚಿಗೆಬ್ಬಿಸಿದ್ದೂ ಉಂಟು. ಆದರೆ ಶ್ರೀಗಳವರು ಇತರರನ್ನು ಒಲಿಸಲು ತನ್ನ ಧರ್ಮಮಾರ್ಗವನ್ನು ಬಿಡಲಿಲ್ಲ. ಭಕ್ತಿಯಿಂದ ಆರಾಧಿಸಿದ ಯಾವ ಜಾತಿ, ಧರ್ಮದವರನ್ನೇ ಆಗಲೀ ಅವರಿಗೆ ಮಾರ್ಗದರ್ಶನ ನೀಡುತ್ತಿದ್ದರು. ಇದು ಶ್ರೀಗಳವರ ಪರಮತ ಸಹಿಷ್ಣುತೆಗೆ, ಮೇಲು-ಕೀಳೆಂಬ ಭೇದರಹಿತ ವರ್ತನೆಗೆ ಸಾಕ್ಷಿ. ತನ್ನ ಸಂಚಾರ ಕಾಲದಲ್ಲಿ ಸಂತಾನವಿಲ್ಲದೇ ಕೊರಗುತ್ತಿದ್ದ ಅನೇಕರಿಗೆ ಶ್ರೀಕೃಷ್ಣ ಮಂತ್ರದಿಂದ ತೆಂಗಿನಕಾಯಿ ಮಂತ್ರಿಸಿಕೊಟ್ಟು, ಸಂತಾನಪ್ರಾಪ್ತಿಯಾಗುವಂತೆ ಅನುಗ್ರಹಿಸಿ ಪವಾಡಪುರುಷರೆನಿಸಿದ್ದರು.

ಮೂರನೇ ಭಾರಿ ಪರ್ಯಾಯಕ್ಕೆ ಉಡುಪಿಗೆ ಬಂದ ಶ್ರೀಗಳವರನ್ನು ಜನತೆ 'ನಭೂತೋ ನ ಭವಿಷ್ಯತಿ' ಎಂಬ ರೀತಿಯಲ್ಲಿ ಸ್ವಾಗತಿಸಿದರು. ಬಹಳ ಅದ್ದೂರಿಯ ಮೆರವಣಿಗೆಯಲ್ಲಿ ಆನೆಯ ಮೇಲೆ ಅಂಬಾರಿಯಲ್ಲಿ ಶ್ರೀಗಳವರನ್ನು ಕರೆತರಲು ಸನ್ನಾಹ ಮಾಡಿದ್ದರೂ, ಶ್ರೀಗಳವರು ಇತರ ಹಿರಿಯ ಯತಿಗಳ ಸಮಕ್ಷಮದಲ್ಲಿ ತಾನು ಅಂಬಾರಿ ಏರುವುದಿಲ್ಲವೆಂದು ಕಾಲ್ನಡಿಗೆಯಲ್ಲೇ ಪುರಪ್ರವೇಶ ಮಾಡಿದರು. ಆಗ ಆ ಅಂಬಾರಿ ಏರುವ ಭಾಗ್ಯ ಪುಟ್ಟ ಬಾಲಕನಾಗಿದ್ದ ನನಗೆ ಶ್ರೀಗಳವರಿಂದ ಲಭಿಸಿತು. ಬಳಿಕ, ಶ್ರೀಕೃಷ್ಣ ದರ್ಶನಾ ನಂತರ ಮೊದಲು ಶ್ರೀಗಳವರು ಮಠದಲ್ಲಿದ್ದ ತನ್ನ ೮೫ ವರ್ಷದ ತಾಯಿಗೆ ಗಂಗಾತೀರ್ಥದಿಂದ ಅಭಿಷೇಕ ಮಾಡಿ ದಂಡಹಿಡಿದು ಮೂರು ಸುತ್ತು ಬಂದು ಸಾಷ್ಟಾಂಗ ನಮಸ್ಕಾರ ಮಾಡಿದರು. ಈ ಅತ್ಯಂತ ಮಾತೃ ಭಕ್ತಿಯ ರೋಮಾಂಚನ ದೃಶ್ಯವನ್ನು ಕಂಡು ನೂರಾರು ಜನ ಪುಳಕಿತರಾದರು. ಅವರ ಸಮಕಾಲೀನ ಯತಿಗಳು ಈ ದೃಶ್ಯವನ್ನು ನೋಡಿ ಇಂತಹ ಸುಪುತ್ರನನ್ನು ಪಡೆದ ತಾಯಿ ಎಂಥಾ ಪುಣ್ಯವಂತೆ! ಎಂಬ ಉದ್ಗಾರದಿಂದ ಆನಂದಬಾಷ್ಪ ಸುರಿಸಿದರು.

ಶ್ರೀಗಳವರು ಶ್ರೀ ಭಾಗವತ ಸಪ್ತಾಹ ಕಾರ್ಯವನ್ನು ಏಳು ದಿನಗಳ ಕಾಲ ನಿರಾಹಾರವಾಗಿ ಭಗವನ್ನಾಮ ಸ್ಮರಣೆ ಮಾತ್ರದಿಂದ ಶ್ರೀದೇವರ ತೀರ್ಥವಲ್ಲದೇ ಬೇರೇನೂ ಸೇವಿಸದೆ ಸಂಪೂರ್ಣವಾಗಿ ನಿರಾಯಾಸದಿಂದ ಮಾಡಿದರು. ನಮ್ಮ ಧರ್ಮ ಎಂದರೇನು ? ಧರ್ಮದ ಸ್ವಾರಸ್ಯವೇನು ?

ಸಾಮರ್ಥ್ಯವೇನು? ನಮ್ಮ ದಿನನಿತ್ಯದ ಜೀವನದಲ್ಲಿ ಧರ್ಮದ ಅಗತ್ಯವೇನು ? ಸನ್ಯಾಸಿಗಳಿಂದ ಸಮಾಜಕ್ಕೆ ಆಗುವ ಉಪಕಾರವೇನು ? ಇವೆಲ್ಲವನ್ನೂ ಶ್ರೀಗಳವರು ತಮ್ಮ ಬದುಕಿನಲ್ಲಿಯೇ ತೋರಿಸಿದ್ದಾರೆ.

ತನ್ನ ಸಂಚಾರಕಾಲದಲ್ಲಿ ಧಾರವಾಡ, ಹುಬ್ಬಳ್ಳಿ, ಬೆಳಗಾಮ್, ರಾಯಚೂರು, ಬಾದಾಮಿ, ರಾಮದುರ್ಗ, ಜಮಖಂಡಿ, ಉತ್ತರ ಕರ್ನಾಟಕ, ಬಾಗಲಕೋಟೆ, ಗುಲ್ಬರ್ಗಾ ಮುಂತಾದ ಸ್ಥಳಗಳಲ್ಲಿಯೂ ಉತ್ತರಾದಿ ಮಠ, ವ್ಯಾಸರಾಯ ಮಠ, ರಾಘವೇಂದ್ರ ಮಠದ ಶಿಷ್ಯರಿಂದ ಅತ್ಯಂತ ಕೊಂಡಾಡಲ್ಪಟ್ಟವರು. ಪ್ರಸಾರ ಮಾಧ್ಯಮಗಳಾದ ರೇಡಿಯೋ, ಪತ್ರಿಕೆ, ಟೀವಿಗಳಿಲ್ಲದಿದ್ದ ಆ ಕಾಲದಲ್ಲಿ ಸ್ವಸಾಮರ್ಥ್ಯದಿಂದ ಜನಾನುರಾಗಿಯಾಗಿ, ಪ್ರಖ್ಯಾತರಾದವರು ಶ್ರೀ ವಿಶ್ವಜ್ಞತೀರ್ಥರು. ಶ್ರೀಮಧ್ವಾಚಾರ್ಯ ಪೀಠಕ್ಕೆ ಕಲಶಪ್ರಾಯರಾಗಿದ್ದರು.

ಕುತ್ತೆತ್ತೂರಿನ ಗೋವಿಂದದಾಸರೆಂಬ ಭಗವದ್‌ಭಕ್ತರು ಪೇಜಾವರ ಮಠದಲ್ಲಿ ಇದ್ದು, ಶ್ರೀ ವಿಶ್ವಜ್ಞತೀರ್ಥರನ್ನು ಅನುಗಾಲವೂ ಸೇವಿಸುತ್ತ ಭಜನೆ ಕೀರ್ತನೆ ಮಾಡುತ್ತಾ ಶ್ರೀಕೃಷ್ಣ ಮುಖ್ಯಪ್ರಾಣ ದೇವರ ಹಾಗೂ ಮಠದ ಆರಾಧ್ಯ ದೇವರ ಚಿಂತನೆ ಹಾಗೂ ಸೇವೆ ಮಾಡುತ್ತಿದ್ದರು. ಶ್ರೀಗಳವರನ್ನು ಗೋವಿಂದದಾಸರು ಆರಾಧ್ಯ ದೈವವೆಂದೇ ನಂಬಿದ್ದರು. ಕುತ್ತೆತ್ತೂರು ಗೋವಿಂದದಾಸರ ಕುಟುಂಬ ಇಂದಿಗೂ ಪೇಜಾವರ ಮಠದ ಮೇಲೆ ಅನನ್ಯಭಕ್ತಿ ಇಡಲು ಕಾರಣ ಶ್ರೀ ಶ್ರೀ ವಿಶ್ವಜ್ಞತೀರ್ಥರು.

ಶ್ರೀಗಳವರ ಮೂರನೇ ಪರ್ಯಾಯಕ್ಕೆ ವಾಹನ ಸೌಲಭ್ಯಗಳಿಲ್ಲದಿದ್ದಾಗಲೂ ಅವರ ಸಂಚಾರದ ಫಲವಾಗಿ ಸಹಸ್ರಾರು ಸಂಖ್ಯೆಯಲ್ಲಿ ಎತ್ತಿನ ಗಾಡಿಗಳಲ್ಲಿ ಪರನಾಡಿನಿಂದ ಜನರು ಉಡುಪಿಗೆ ಬಂದಿಳಿದುದು ಶ್ರೀಗಳವರ ಜನಾನುರಾಗಕ್ಕೆ ಸಾಕ್ಷಿ. ಆದರೆ ವಿಧಿ ನಿಯಮವೇ ಬೇರೆ ಆಗಿತ್ತು. ಈ ಪರ್ಯಾಯಕ್ಕೆ ಆರು ತಿಂಗಳುಗಳು ಇರುವಾಗಲೇ ಶ್ರೀಗಳವರು ವೈಕುಂಠವಾಸಿಗಳಾದರು. ಶ್ರೀಗಳವರ ಶಿಷ್ಯರಾದ ಮಠದ ಪರಂಪರೆಯಲ್ಲಿ ೩೧ನೇ ಯತಿವರ್ಯರಾದ ಶ್ರೀ ವಿಶ್ವಮಾನ್ಯತೀರ್ಥರು ತಮ್ಮ ಗುರುಗಳು ಆಶಿಸಿದ್ದಂತೆ ಬಹಳ ವೈಭವದಿಂದ ಪರ್ಯಾಯ ಮಹೋತ್ಸವವನ್ನು ಆಚರಿಸಿದರು. ಮಹಾ ಜ್ಞಾನಿಗಳೂ ತಪಸ್ವಿಗಳೂ ಆಗಿದ್ದ ಶ್ರೀ ಶ್ರೀ ವಿಶ್ವಮಾನ್ಯ ತೀರ್ಥರನ್ನು ಹೆಚ್ಚುಕಾಲ ಬಾಳಲು ವಿಧಿ ಅನುಮತಿಯನ್ನು ಕೊಡಲಿಲ್ಲ.

ಶ್ರೀಮಠದ ಭವ್ಯ ಪರಂಪರೆಯಲ್ಲಿ ಹಿಂದಿನ ಪೂಜ್ಯ ಯತಿವರ್ಯರೆಲ್ಲರ ಅನುಗ್ರಹವನ್ನು ಪಡೆದಿರುವ ಶ್ರೀ ವಿಶ್ವೇಶತೀರ್ಥರು ತಮ್ಮ ಶೀಲ, ಸಂಯಮ, ಔದಾರ್ಯ, ಜ್ಞಾನ, ಭಕ್ತಿ, ವೈರಾಗ್ಯ, ಲೋಕಹಿತ ಸಾಧನೆಯ ದೀಕ್ಷೆ ಇವುಗಳನ್ನು ಮೈಗೂಡಿಸಿಕೊಂಡು ರಾರಾಜಿಸುತ್ತಿದ್ದಾರೆ. ಶ್ರೀಕೃಷ್ಣನ ಅನುಗ್ರಹದಿಂದ ಶ್ರೀ ವಿಶ್ವೇಶತೀರ್ಥ ಶ್ರೀಪಾದರ ಧಾರ್ಮಿಕ ಜಾಗೃತಿಯ ಕಹಳೆಯು ಎಲ್ಲಾ ಸಜ್ಜನರನ್ನು ಎಚ್ಚರಿಸಲಿ. ಅವರ ಪರ್ಯಾಯ ಚಾರಿತ್ರಿಕ ಪರ್ಯಾಯವಾಗಿ ಉಡುಪಿಯಲ್ಲಿ ಅನೇಕಾನೇಕ ಕಲ್ಯಾಣ ಕಾರ್ಯಗಳು ನಡೆಯಲಿ ಎಂದು ನಾನು ಶ್ರೀಗುರು ಹರಿ ವಾಯುಗಳಲ್ಲಿ ಪ್ರಾರ್ಥಿಸುತ್ತೇನೆ.

('ದೀಕ್ಷಾ'-೧೯೮೪, ಪೇಜಾವರ ಮಠ, ಉಡುಪಿ)

●

